# ಸಾಹಿತ್ಯ ಚಿಂತನೆ "ನಾನೇಕೆ ಬರೆಯುತ್ತೇನೆ" ಲೇಖನಗಳ ಮುಖೇನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ರಶ್ಮಿ

ಮಾರ್ಗದರ್ಶಕರು
ಡಾ. ಅಮರೇಶ ನುಗಡೋಣಿ
ಪ್ರವಾಚಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೦೯-೨೦೧೦

# ಸಾಹಿತ್ಯ ಚಿಂತನೆ "ನಾನೇಕೆ ಬರೆಯುತ್ತೇನೆ" ಲೇಖನಗಳ ಮುಖೇನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ರಶ್ಮಿ

ಮಾರ್ಗದರ್ಶಕರು
ಡಾ. ಅಮರೇಶ ನುಗಡೋಣಿ
ಪ್ರವಾಚಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩.೨೭೬
೨೦೦೯-೨೦೧೦



# ಪ್ರಮಾಣ ಪತ್ರ

ಸಾಹಿತ್ಯ ಚಿಂತನೆ "ನಾನೇಕೆ ಬರೆಯುತ್ತೇನೆ" ಲೇಖನಗಳ ಮುಖೇನ ಎಂಬ ನಿಬಂಧವನ್ನು 'ಡಾ. ಅಮರೇಶ ನುಗಡೋಣಿ' ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ 'ಭಾಷಾನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ'ಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಈ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 14.09.2010

ರಶ್ಮಿ

ಸಂಶೋಧಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಾರ್ಗದರ್ಶಕರ ಪ್ರಮಾಣ ಪತ್ರ

**ಸಾಹಿತ್ಯ ಚಿಂತನೆ "ನಾನೇಕೆ ಬರೆಯುತ್ತೇನೆ" ಲೇಖನಗಳ ಮುಖೇನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ರಶ್ಮಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ** :ವಿದ್ಯಾರಣ್ಯ
**ದಿನಾಂಕ :**

**ಡಾ. ಅಮರೇಶ ನುಗಡೋಣಿ**
ಪ್ರವಾಚಕರು ಹಾಗೂ ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ಮುಖ್ಯಗುಣವೆಂದರೆ ಪ್ರಾಚೀನ ಸಾಹಿತ್ಯವಿರಲಿ, ಮಧ್ಯಕಾಲೀನ ಸಾಹಿತ್ಯವಿರಲಿ ಆಧುನಿಕ ಕನ್ನಡ ಸಾಹಿತ್ಯವಿರಲಿ, ಆಯಾ ಕಾಲದ ಸಾಹಿತಗಳು ತಮ್ಮ ಕೃತಿ ರಚನೆಗೆ ಇರುವ ಉದ್ದೇಶಗಳನ್ನು ಹೇಳಿಕೊಳ್ಳುತ್ತಾ ಬಂದಿದ್ದಾರೆ. ಕನ್ನಡದಲ್ಲಿ ಜೈನಕವಿಗಳು ತಮ್ಮ ಕೃತಿಗಳಲ್ಲಿ ತಮ್ಮ ಬದುಕಿಗೆ ಸಂಬಂಧಿಸಿದ ಅನೇಕ ವಿವರಗಳನ್ನು ಬರೆದುಕೊಂಡಿದ್ದಾರೆ. ವೈಯಕ್ತಿಕ ವಿಷಯಗಳ ಜೊತೆಗೆ ತಾವು ಬರೆಯುತ್ತಿರುವ, ಬರೆದ, ಕಾವ್ಯದ ಉದ್ದೇಶವನ್ನು ಪ್ರೇರಣೆ, ಧೋರಣೆಗಳನ್ನು ಬರೆದುಕೊಂಡಿದ್ದಾರೆ. ಹೀಗೆ ಸಾಹಿತಿಗಳು ತಮ್ಮ ಸಾಹಿತ್ಯ ರಚನೆಗೆ ಕಾರಣಗಳನ್ನು ಮತ್ತು ಅದರ ಮಹತ್ವವನ್ನು ಹೇಳಿಕೊಂಡಿರುವ ಅನೇಕ ಉದಾಹರಣೆಗಳು ಪ್ರಾಚೀನ ಕನ್ನಡ ಕೃತಿಗಳಲ್ಲಿ ನಮಗೆ ದೊರೆಯುತ್ತಿವೆ. ಇಂತಹ ಸಾಹಿತಿಗಳ ಚರಿತ್ರೆಯನ್ನು ಮತ್ತು ಅವರು ಬರೆದಿರುವ ಕಾವ್ಯವನ್ನು ಕುರಿತು ವಿಮರ್ಶೆ ಅಥವಾ ಅಧ್ಯಯನ ಕೈಗೊಳ್ಳುವಾಗ ಇಂತಹ ಮಹತ್ವದ ಸಂಗತಿಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಆಧುನಿಕ ಕಾಲದ ಮುಖ್ಯ ಗುಣವಾಗಿದೆ. ಕಾವ್ಯ ಮೀಮಾಂಸೆ, ಕಾವ್ಯತತ್ವದ ಹೆಸರಿನಲ್ಲಿ ಅಧ್ಯಯನಗಳು ನಡೆಯುತ್ತಾ ಬಂದಿವೆ.

ಪಂಪನು ತನ್ನ ಕೃತಿಯಾದ ಪಂಪಭಾರತದಲ್ಲಿ ಹೀಗೆ ಹೇಳುತ್ತಾನೆ.

> "ವ್ಯಾಸಮುನೀಂದ್ರ ರುದ್ರ ವಚನಾಮೃತ ವಾರ್ಧಿಯ ನೀಸುವೆನ್
> ಕವಿ ವ್ಯಾಸನೆನ್ ಎಂಬ ಗರ್ವಮೆನಗಿಲ್ಲ',
> 'ಮುಂಸಮಸ್ತ ಭಾರತಮನ್
> ಅಪೂರ್ವಮಾಗೆಪೇಳ್ದ ಕವೀಶ್ವರರ್ ಇಲ್ಲ."[೧]

ಪಂಪನ ಈ ಧೋರಣೆ ಅವನ ಕಾವ್ಯದ ಮಹತ್ವವನ್ನು ತೋರಿಸುತ್ತದೆ. ಮುಂದೆ ಮಧ್ಯಕಾಲೀನ ಸಾಹಿತ್ಯದ ಕವಿಗಳಲ್ಲಿ ಈ ಧೋರಣೆ ಬದಲಾಗುತ್ತವೆ. ಜೈನ ಕವಿಗಳ ಮಹಾಭಾರತ, ರಾಮಾಯಣ, ತೀರ್ಥಂಕರ ಪುರಾಣಗಳನ್ನು ಒರೆಗೆ ಹಚ್ಚುವಂತೆ ವಚನಕಾರರು ತಮ್ಮ ವಚನಗಳ ಧೋರಣೆಯನ್ನು ಪ್ರಕಟಿಸುತ್ತಾರೆ.

"ಆದಿ ಪುರಾಣ ಅಸರರಿಗೆ ಮಾರಿ
ವೇದ ಪುರಾಣ ಹೋಂತಿಗೆ ಮಾರಿ
ರಾಮ ಪುರಾಣ ಗೋತ್ರಕ್ಕೆ ಮಾರಿ
ಎಲ್ಲಾ ಪುರಾಣ ಕರ್ಮಕ್ಕೆ ಮೊದಲು
ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲಸಂಗಮದೇವಾ"[2]

ಹೀಗೆ ಪ್ರಕಟಿಸುವುದರ ಮೂಲಕ ಹೊಸ ತಾತ್ವಿಕಯನ್ನು ತಮ್ಮ ವಚನಗಳ ಮೂಲಕ ಹೊಸದನ್ನು ಸೃಷ್ಟಿಸಲು ಪ್ರಯತ್ನಿಸಿದ್ದಾರೆ. ಮುಂದೆ ಹರಿಹರನು ಕೂಡ ತನ್ನ ಕಾವ್ಯದ ಧೋರಣೆಯನ್ನು ವಚನಕಾರರಿಗಿಂತ ಭಿನ್ನವಾಗಿ ಹೇಳುತ್ತಾನೆ.

"ಮನುಜರ ಮೇಲೆ ಸಾವವರ ಮೇಲೆ ಕನಿಷ್ಠದ ಮೇಲೆಯಕ್ಕಟಾ
ತನ ತನಗಿಂದ್ರ ಚಂದ್ರ ರವಿಕರ್ಣ ದಧೀಚಿ ಬಲೀಂದ್ರನೆಂದು ವೇಣ್
ಅನವರತಂ ಪೊಗಳ್ದು ಕಿಬೇಡಲೆ ಮಾನವ ಧೀನಹರ್ನಿಶಂ
ನೆನೆಪೊಗಳೆರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯೊಳ್ದನಂ"[3]

ಹೀಗೆ ಭವಿಗಳನ್ನು ಕುರಿತು ಕಾವ್ಯವನ್ನು ರಚಿಸುವುದಿಲ್ಲ. ಭಕ್ತರನ್ನು ಕುರಿತು ಕಾವ್ಯವನ್ನು ರಚಿಸುತ್ತೇನೆ ಎಂದು ತನ್ನ ಕಾವ್ಯ ಧೋರಣೆಯನ್ನು ಖಚಿತ ಪಡಿಸುತ್ತಾನೆ.

ಚಾರಿತ್ರಿಕ ಕಾವ್ಯಗಳನ್ನು ಬರೆಯುವ ಕವಿಗಳು ಮಧ್ಯಕಾಲದಲ್ಲಿ ಕಾಣಿಸಿಕೊಳ್ಳುತ್ತಾರೆ. "ಕುಮಾರರಾಮ ಸಾಂಗತ್ಯ"ವನ್ನು ಬರೆದ ನಂಜುಂಡ ಕವಿ

"ಇದು ಪುಣ್ಯ ಕತೆಯಲ್ಲ ಇದು ಪೂರ್ವ ಚರಿತಲ್ಲ
ಇದು ಪುರಾಣದೊಳುಕ್ತವಲ್ಲ
ಇದನೆಂತಾಲಿಪೇನೆಂಬ ಸಜ್ಜನ
ಕೇಳಿದ ಕುತ್ತರದ ಪೇಳುವನು."[4]

ಎಂದು ತನ್ನ ಕಥಾವಸ್ತು ಹೇಗೆ ಭಿನ್ನ ಎಂಬುದನ್ನು ಸಾರುತ್ತಾನೆ. ಕುಮಾರರಾಮನಂತಹ ಒಬ್ಬ ವೀರನನ್ನು ಕುರಿತು ಕಾವ್ಯ ಬರೆಯುವಾಗ ಈ ನಾಯಕನ ಕಥೆ ಪುಣ್ಯ ಕಥೆಯು ಅಲ್ಲ, ಪುರಾಣ ಕಥೆಯೂ ಅಲ್ಲದ ಒಬ್ಬ ಸಮಕಾಲೀನ ವೀರನ ಕಥೆ ಹೀಗಾಗಿ ಇದು ಭಿನ್ನ ಎಂದು ಪ್ರಕಟಿಸುತ್ತಾನೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಕಾವ್ಯ ಸಾಹಿತ್ಯದಲ್ಲಿ ಕುವೆಂಪು, ಬೇಂದರೆ ತಮ್ಮ ಕಾವ್ಯದ ಧೋರಣೆಯನ್ನು ಹೇಳಿಕೊಂಡಿದ್ದಾರೆ. ನವ್ಯದ ಕವಿ ಗೋಪಾಲಕೃಷ್ಣ ಅಡಿಗರು ತಮ್ಮ ಕಾವ್ಯದ ವಸ್ತು ಅಭಿವ್ಯಕ್ತಿ ವಿಧಾನ ಹೇಗೆ ಭಿನ್ನವಾಗಿರಬೇಕು ಎಂಬ ಆತಂಕವನ್ನು ಮತ್ತು ಭಿನ್ನತೆಯನ್ನು ಸಾಧಿಸುವುದಕ್ಕೆ ಹೀಗೆ ಹೇಳುತ್ತಾರೆ.

"ಅನ್ಯರೊರೆದುದನೆ ಬರೆದುದನೆ ನಾ ಬರೆ ಬರೆ ಬರೆದು
ಭಿನ್ನಗಾಗಿದೆ ಮನವು ಬಗೆಯೊಳಗನೇ ತೆರೆದು
ನನ್ನ ನುಡಿಯೊಳೆ ಬಣ್ಣ ಬಣ್ಣದಲ್ಲಿ ಬಣ್ಣಿಸುವ
ಪನ್ನತಿಗೆ ಬರುವನಕ ನನ್ನ ಬಾಳಿದುನರಿತ"[3]

ಆಧುನಿಕ ಕನ್ನಡ ಸಾಹಿತ್ಯ ರಚನೆಕಾರರು ಅದು ನವೋದಯದವರು ಇರಬಹುದು, ನವ್ಯ ಪ್ರಗತಿಶೀಲ, ದಲಿತ ಬಂಡಾಯ, ಸಾಹಿತ್ಯ ಚಳುವಳಿ ಸಂದರ್ಭದ ಬರಹಗಾರರಿರಬಹುದು ಅವರೆಲ್ಲ ತಮ್ಮ ಕಾವ್ಯವನ್ನು ಬರೆಯುವಾಗ ಕಾವ್ಯದ ಧೋರಣೆಯ ಸಮಸ್ಯೆಯನ್ನು ಕುರಿತು ಗಂಭೀರವಾಗಿ ಆಲೋಚಿಸುತ್ತಾರೆ. ಯಾರನ್ನು ಕುರಿತು ಯಾವುದನ್ನು ಕುರಿತು, ಬರೆಯಬೇಕು ಮತ್ತು ಬರೆಯಬಾರದು ಎಂಬ ಪ್ರಶ್ನೆಯನ್ನು ಎದುರಿಸಿ ತಮ್ಮ ನಿಲುವನ್ನು ಪ್ರಕಟಿಸುವ ಗುಣವನ್ನು ನಾವು ಕಾಣುತ್ತೇವೆ. ಆಧುನಿಕ ಸಾಹಿತ್ಯ ವಿಮರ್ಶೆಯಲ್ಲಿ ಕಾವ್ಯತತ್ವವನ್ನು, ಕಾವ್ಯ ಚಿಂತನೆಯನ್ನು ಕುರಿತು ಅಧ್ಯಯನ ಮಾಡುವುದು ಮೊದಲಿನಿಂದಲೂ ಬಂದಿದೆ. ಕಾವ್ಯ ಮೀಮಾಂಸೆ, ಕಾವ್ಯವನ್ನು ಹೇಗೆ ಅಧ್ಯಯನ ಮಾಡಬೇಕು ಎನ್ನುವುದನ್ನು ತಿಳಿಸುತ್ತದೆ. ಕಾವ್ಯ ಹೇಗಿರಬೇಕು, ಕಾವ್ಯದ ಪ್ರಯೋಜನಗಳೇನು ಎನ್ನುವುದನ್ನು ಚಿಂತನೆ ಮಾಡುತ್ತಾ ಬಂದಿದೆ. ಈ ಕಾವ್ಯ ಮೀಮಾಂಸೆ ಎಂದು ಕರೆಯುವ ಈ ಅಧ್ಯಯನವು ಪ್ರಾಚೀನ ಕನ್ನಡ ಸಾಹಿತ್ಯವನ್ನು ಅನುಲಕ್ಷಿಸುತ್ತದೆ. ಮತ್ತು ಸಂಸ್ಕೃತದ ಕಾವ್ಯಗಳನ್ನು ಗಮನದಲ್ಲಿಟ್ಟುಕೊಂಡು ಹುಟ್ಟಿರುವ ಈ ಕಾವ್ಯ ಮೀಮಾಂಸೆಯನ್ನು ಕನ್ನಡ ಕಾವ್ಯಕ್ಕೂ ಅನ್ವಯಿಸಿ ಹೇಳುತ್ತಾ, ಅಧ್ಯಯನ ಮಾಡುತ್ತಾ ಬರಲಾಗಿದೆ.

ಇದನ್ನೇ ಮುಂದುವರೆಸಿದ ಜಿ.ಎಸ್. ಶಿವರುದ್ರಪ್ಪ ಅವರು ಕನ್ನಡ ಕವಿಗಳ ಕಾವ್ಯಕಲ್ಪನೆ, ಹೊಸಗನ್ನಡ ಕವಿಗಳಲ್ಲಿ ಕಾವ್ಯ ಚಿಂತನೆ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಶಂಕರ ಮೊಕಾಶಿ ಪುಣೇಕರ ಅವರು "ಬೇಂದ್ರೆ ಕಾವ್ಯ ಮೀಮಾಂಸೆ"ಯನ್ನು ಬರೆದಿದ್ದಾರೆ. ಈಚೆಗೆ ಇಂತಹ ಪ್ರಯೋಗಗಳು ನಡೆಯುತ್ತಿವೆ. ಉದಾಹರಣೆಗೆ ಬರಗೂರು ರಾಮಚಂದ್ರಪ್ಪ ಅವರು "ಬಂಡಾಯ ಸಾಹಿತ್ಯ ಮೀಮಾಂಸೆ" ವೀರಣ್ಣ ದಂಡೆಯವರು "ವಚನ ಸಾಹಿತ್ಯ ಮೀಮಾಂಸೆ" ಮತ್ತು ಶಿಷ್ಟ ಕಾವ್ಯ ಮೀಮಾಂಸೆ" ಎಂಬ ಅಧ್ಯಯನಗಳನ್ನು ಪ್ರಕಟಿಸಿದ್ದಾರೆ. ಕಾವ್ಯಚಿಂತನೆ ಅಥವಾ ಕಾವ್ಯಮೀಮಾಂಸೆ ಜೊತೆಗೆ ಸಾಹಿತ್ಯ ಚಿಂತನೆ ಎನ್ನುವ ಹೆಸರಿನಲ್ಲಿ ಅಧ್ಯಯನಗಳು ಕಾಣಿಸಿಕೊಳ್ಳತ್ತವೆ. ರಹಮತ್ ತರೀಕೆರೆಯವರು "ಮಾತು ತಲೆಯೆತ್ತುವ ಬಗೆ" ಎನ್ನುವ ಕೃತಿಯಲ್ಲಿ ಕನ್ನಡ ಸಾಹಿತಿಗಳ ಸಾಹಿತ್ಯ ಚಿಂತನೆಯನ್ನು ರೂಪಿಸಲು ಪ್ರಯತ್ನಿಸಿದ್ದಾರೆ. ಮತ್ತು ಕನ್ನಡ ಸೃಜನಶೀಲ ಸಾಹಿತ್ಯವನ್ನು ಕುರಿತು ಅದರೊಳಗೆ ಸಾಹಿತ್ಯ ಚಿಂತನೆಯನ್ನು ಶೋಧಿಸುವ "ಇಲ್ಲಿ ಯಾರೂ ಮುಖ್ಯರಲ್ಲ" ಎನ್ನುವ ಕೃತಿಯನ್ನು ರಚಿಸಿದ್ದಾರೆ.

## ಅಧ್ಯಯನದ ಉದ್ದೇಶ

ಸಾಮಾನ್ಯವಾಗಿ ಸಾಹಿತ್ಯ ಮೀಮಾಂಸೆ, ಕಾವ್ಯ ಮೀಮಾಂಸೆ, ಕಾವ್ಯತತ್ವ ಮುಂತಾದ ಪರಿಕಲ್ಪನೆಗಳ ಮೂಲಕ ನಡೆಯುವ ಅಧ್ಯಯನಗಳಲ್ಲಿ ಪ್ರಧಾನವಾಗಿ ಕಾಣುವುದು ಕವಿಯ ಪರಿಸರ, ಕವಿಯ ಕಾವ್ಯ ಸತ್ವ ಕುರಿತು ಚಿಂತನೆಗಳನ್ನು ನಡೆಸುವದಿರುತ್ತದೆ. ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಕೃತಿ ಮುಖ್ಯವೇ ಹೊರತು ಕೃತಿಕಾರ ಮುಖ್ಯವಲ್ಲ. ಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ಹಲವು ಆಯಾಮಗಳಲ್ಲಿ ಪರಿಶೀಲನೆ ನಡೆಯುತ್ತದೆ. ಪಾಶ್ಚಾತ್ಯ ಸಾಹಿತ್ಯ ಮೀಮಾಂಸೆಯಲ್ಲಿ ಕೃತಿಯ ಕರ್ತೃವಿನನ್ನು ಪರಿಗಣಿಸಿ ಅಧ್ಯಯನ ನಡೆಯುತ್ತದೆ. ಕನ್ನಡದಲ್ಲಿ ಇವೆರಡು ಮಾದರಿಗಳ ಅಧ್ಯಯನ ಮತ್ತು ಎರಡು ಮಾದರಿಗಳನ್ನು ಒಂದೇ ಅಧ್ಯಯನದಲ್ಲಿ ನಡೆಯುವುದನ್ನು ಕಾಣುತ್ತೇವೆ. ಬಿ.ಎಂ.ಶ್ರೀರವರು "ಭಾರತೀಯ ಕಾವ್ಯ ಮೀಮಾಂಸೆ" ಕೃತಿ ಕನ್ನಡದಲ್ಲಿ ತುಂಬಾ ಜನಪ್ರಿಯವಾಗಿದೆ. ಶೈಕ್ಷಣಿಕ ವಲಯದಲ್ಲಿ ಮಹತ್ವದ ಪಾತ್ರವನ್ನು ಈ ಕೃತಿ ನಿರ್ವಹಿಸಿದೆ. ಆದರೂ ಇದು ಸಂಸ್ಕೃತ ಮಹತ್ವದ ಪಾತ್ರವನ್ನು ಈ ಕೃತಿ ನಿರ್ವಹಿಸಿದೆ. ಆದರೂ ಇದು ಸಂಸ್ಕೃತಿ ಕಾವ್ಯ ಮೀಮಾಂಸೆಯನ್ನು ಕನ್ನಡಕ್ಕೆ ಪರಿಚಯಿಸುವ ಕೃತಿಯಾಗಿದೆ. ಮತ್ತು ಇದರ ಸಹಾಯದಿಂದ ಪ್ರಾಚೀನ ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡುವುದಕ್ಕೆ ಸೀಮಿತವಾಗಿದೆ. ಇದನ್ನು ಅನುಸರಿಸಿ ಕೆಲವರು ಮಧ್ಯಕಾಲೀನ, ಆಧುನಿಕ ಕಾಲದ ಸಾಹಿತ್ಯವನ್ನು ಒಳಹುಮಾಡಿ ಅಧ್ಯಯನ ಮಾಡಲಾಗಿದೆ. ಆದರೆ ಆಧುನಿಕ ಕನ್ನಡ ಹಲವು ಪ್ರಕಾರಗಳಲ್ಲಿ ಬೆಳೆದಿವೆ. ಈ ಹಲವು ಪ್ರಕಾರಗಳ ಮೂಲಕ ಸಾಹಿತ್ಯ ತತ್ವನ್ನು ಗುರುತಿಸುವ, ಶೋಧಿಸುವ ಕೆಲಸ ಅಷ್ಟಾಗಿ ನಡೆಯಲಿಲ್ಲ. ಪರೋಕ್ಷವಾಗಿ ವಿಮರ್ಶೆಯ ಹೆಸರಿನಲ್ಲಿ ನಡೆದಿದೆ. ಶಂಕರ ಮೊಕಾಶಿ ಪುಣೇಕರ, ಕೆ. ಕೃಷ್ಣಮೂರ್ತಿ, ಜಿ.ಎಸ್. ಶಿವರುದ್ರಪ್ಪ, ವೀರಣ್ಣ ದಂಡೆ, ರಹಮತ್ ತರೀಕೆರೆ, ಡಿ.ಎಸ್. ನಾಗಭೂಷಣ ಮುಂತಾದವರು ಬಿಡಿ ಬಿಡಿ ಕವಿಗಳ ಮೇಲೆ ಅಧ್ಯಯನ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಮೂಲ ಲೇಖಕರು ತಮ್ಮ ಯಾವುದೋ ಸಾಹಿತ್ಯ ಕೃತಿಗಳಲ್ಲಿ ಮುನ್ನುಡಿ, ನನ್ನ ಮಾತು ಬರೆಯುವಾಗ ಈ ತರಹದ ಬರಹಗಳಲ್ಲಿ ಸಾಹಿತ್ಯ ಚಿಂತನೆಯನ್ನು ಗ್ರಹಿಸಲು ಅವಕಾಶವಿದೆ. ಅಲ್ಲದೇ ಅನೇಕ ವಿಷಯಗಳನ್ನು ಕುರಿತು ಬರೆದ ಲೇಖನಗಳಲ್ಲಯೂ ಸಾಹಿತ್ಯ ಚಿಂತನೆಯನ್ನು ಶೋಧಿಸಬಹುದು. ಇದಕ್ಕೆ ಉದಾಹರಣೆಯಾಗಿ 'ಮಾತು ತಲೆಯೆತ್ತುವ ಬಗೆ' ಅಧ್ಯಯನ ಕೃತಿಯನ್ನು ಗಮನಿಸಬಹುದು. ಅನೇಕ ಬರಹಗಾರರು ತಮ್ಮ ರಚನೆಗಳನ್ನು ದೀರ್ಘಕಾಲ ಹಲವು ಪ್ರಕಾರಗಳಲ್ಲಿ ಬರೆದಿದ್ದರೂ ಸಂದರ್ಭಾನುಸಾರ 'ನಾನೇಕೆ ಬರೆಯುತ್ತೇನೆ' ಎಂದೂ ತಮ್ಮ ಸಾಹಿತ್ಯವನ್ನು ಕುರಿತ ಈ ಪ್ರಶ್ನೆಗೆ ಚಿಂತನೆ ಮಾಡಿ ಬರೆದ ಲೇಖನಗಳಿವೆ. ಇವುಗಳನ್ನು ಕುರಿತು ಅವರ ಸಾಹಿತ್ಯದ ಅಧ್ಯಯನ ಮಾಡುವುದಕ್ಕೆ ಮತ್ತು ಸಾಹಿತ್ಯ ಚಿಂತನೆಯನ್ನು ಕಟ್ಟುವುದಕ್ಕೆ ಅವಕಾಶವಿದೆ. ಈ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

## ಅಧ್ಯಯನದ ಮಹತ್ವ

ಕನ್ನಡದ ಬರಹಗಾರರು ಹಲವು ಪ್ರಕಾರಗಳಲ್ಲಿ ಮಹತ್ವದ ಕೃತಿಗಳನ್ನು ರಚಿಸಿದ ಕೃತಿಗಳನ್ನು ಕುರಿತು ಆರಂಭದಲ್ಲಿ ಮುನ್ನುಡಿಯ ಹೆಸರಿನಲ್ಲಿ ಕೆಲವು ಮಾತುಗಳನ್ನು ಬರೆಯುವುದು ರೂಢಿ. ಸಾಮಾನ್ಯವಾಗಿ ತಾವು ಬರೆದ ಕೃತಿಗೆ ಪ್ರಭಾವ, ಪ್ರೇರಣೆ ಆದ ಬಗ್ಗೆ ಮತ್ತು ತಮ್ಮ ಕೃತಿಯ ಧೋರಣೆಯನ್ನು ತಿಳಿಸುವ ವಾಡಿಕೆಯನ್ನು ಇಟ್ಟುಕೊಂಡಿರುತ್ತಾರೆ. ಈ ತರಹದ ಲೇಖಕರೇ ಬರೆದುಕೊಂಡ ಮುನ್ನುಡಿಗಳು ಸಾಹಿತ್ಯ ಚಿಂತನೆಯನ್ನು ಸೂಚಿಸುತ್ತವೆ. ಇದನ್ನು ವಿಮರ್ಶಕರು ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದು. ಇನ್ನೊಂದು ಬಗೆ ಯಾವುದೆಂದರೆ ಲೇಖಕರು "ನಾನೇಕೆ ಬರೆಯುತ್ತೇನೆ' ಎನ್ನುವ ಪ್ರಶ್ನೆಯನ್ನು ತಮ್ಮ ಒಟ್ಟು ಸಾಹಿತ್ಯದ ಹಿನ್ನೆಲೆಯಲ್ಲಿ "ನಾನೇಕೆ ಬರೆಯುತ್ತೇನೆ" ಎಂದು ವಿವರಿಸಲು, ವ್ಯಾಖ್ಯಾನಿಸಲು ಪ್ರಯತ್ನ ಪಡುತ್ತಾರೆ. ಅವರು ಯಾಕೆ ಬರೆದಿದ್ದಾರೆ ಎನ್ನುವ ಈ ಬಗೆಯ ಬರಹಗಳನ್ನು ಕುರಿತು ಸಾಹಿತ್ಯ ಚಿಂತನೆ ನಡೆಸುಲು ಅವಕಾಶವಿದೆ. ಇದರಿಂದ ಸಾಹಿತ್ಯ ಚಿಂತನೆಯನ್ನು ಕನ್ನಡದಲ್ಲಿ ರೂಪಿಸಲು ಮಹತ್ವದ ಅವಕಾಶ ಸಿಗುತ್ತದೆ. ಈ ಎಲ್ಲಾ ಕಾರಣಗಳಿಂದ ಈ ಅಧ್ಯಯನ ಮಹತ್ವದೆಂದು ಭಾವಿಸಬಹುದು.

## ಅಧ್ಯಯನದ ವ್ಯಾಪ್ತಿ

ಕನ್ನಡದಲ್ಲಿ ಮಹತ್ವದ ಬರಹಗಾರರಿಗೆ ಪ್ರಶಸ್ತಿ ಗೌರವ ಸಿಕ್ಕಾಗ ಆ ಸಂದರ್ಭದಲ್ಲಿ ಮಾತನಾಡುವ ಅವಕಾಶಗಳು ಬರುತ್ತವೆ. ಅಂತಹ ಸಂದರ್ಭದಲ್ಲಿ ನಾನು ಯಾಕೆ ಬರೆಯುತ್ತಿದ್ದೇನೆ? ಅದರ ಉದ್ದೇಶವೇನು? ಮಹತ್ವವೇನು? ಪ್ರಯೋಜನವೇನು? ಎಂದು ಲೇಖಕ ಹೇಳಿಕೊಳ್ಳಲು ಪ್ರಯತ್ನಿಸುತ್ತಾನೆ.

ಕೆಲವು ಸಲ ಮಹತ್ವದ ಲೇಖಕರಿಗೆ ಸಂದರ್ಶಕರು, ಪತ್ರಿಕೆಗಳು, ಟಿ.ವಿ., ರೇಡಿಯೋ, ಮಾಧ್ಯಮಗಳು ಈ ಪ್ರಶ್ನೆಯನ್ನು ಹಾಕುತ್ತವೆ. ಇಂತಹ ಸಂದರ್ಭದಲ್ಲಿಯೂ ಸಾಹಿತಿಗಳು ವಿವರಿಸಲು ಪ್ರಯತ್ನಿಸುತ್ತಾರೆ. ಒಮ್ಮೊಮ್ಮೆ ಸ್ವಯಂ ಪ್ರೇರಣೆಯಿಂದಲೂ, ತಮ್ಮ ಸಾಹಿತ್ಯವನ್ನು ಕುರಿತು ನಾನೇಕೆ ಬರೆಯುತ್ತೇನೆ? ಎಂಬ ಪ್ರಶ್ನೆಗೆ ಉತ್ತರ ರೂಪದ ವಿವರಣೆಯನ್ನು ಕೊಡುತ್ತಾರೆ. ಹೀಗೆ ಕನ್ನಡದಲ್ಲಿ ಅನೇಕ ತಲೆಮಾರಿನ ಲೇಖಕರು ಕಾಲಕಾಲಕ್ಕೆ ಬರೆದ ನಾನೇಕೆ ಬರೆಯುತ್ತೇನೆ ಎನ್ನುವ ಬರಹಗಳು ಇವೆ. ಇವುಗಳಲ್ಲಿ ಕೆಲವುಗಳನ್ನು ಸಂಗ್ರಹಿಸಿ "ನಾನೇಕೆ ಬರೆಯುತ್ತೇನೆ" ಎನ್ನುವ ಕೃತಿಯನ್ನು ಪ್ರಕಟಿಸಲಾಗಿದೆ. (ಸಂ. ಡಾ. ಅಮರೇಶ ನುಗಡೋಣಿ) ಈ ಕೃತಿಯಲ್ಲಿ ಶ್ರೀ ದ.ರಾ. ಬೇಂದ್ರೆ, ಶ್ರೀ ಶಂಬಾ ಜೋಶಿ, ಪ್ರೊ. ಎ.ಎನ್. ಮೂರ್ತಿರಾವ್, ಶ್ರೀರಂಗ, ಶ್ರೀ. ಪು.ತಿ. ನರಸಿಂಹಾಚಾರ್, ಡಾ. ಸಿದ್ಧಯ್ಯ ಪುರಾಣಿಕ, ಡಾ. ಜಿಎಸ್. ಶಿವರುದ್ರಪ್ಪ, ಶ್ರೀ ಯಶವಂತ ಚಿತ್ತಾಲ, ಡಾ. ಯು.ಆರ್. ಅನಂತಮೂರ್ತಿ, ಶ್ರೀ ಪಿ. ಲಂಕೇಶ್, ಪ್ರೊ. ಕೆ.ಎಸ್. ನಿಸಾರ ಅಹಮದ್, ಡಾ. ಚಂದ್ರಶೇಖರ ಕಂಬಾರ,

ಡಾ. ಎಂ.ಎಂ. ಕಲಬುರ್ಗಿ, ಡಾ. ಗೀತಾ ನಾಗಭೂಷಣ, ಶ್ರೀ ಜಂಬಣ್ಣ ಅಮರಚಿಂತ, ಪ್ರೊ. ಎಸ್.ಜಿ. ಸಿದ್ಧರಾಮಯ್ಯ, ಶ್ರೀ. ಫಕೀರ ಮಹಮದ್ ಕಟ್ಪಾಡಿ, ಶ್ರೀ ನಾಗೇಶ ಹೆಗಡೆ, ಶ್ರೀ ಕೆ. ಸತ್ಯನಾರಾಯಣ, ಶ್ರೀ ಎಚ್.ಎಸ್. ಶಿವಪ್ರಕಾಶ್, ಶ್ರೀಮತಿ ನೇಮಿಚಂದ್ರ, ಡಾ ಅರವಿಂದ ಮಾಲಗತ್ತಿ, ಶ್ರೀ. ಬಸವರಾಜ ಕುಕ್ಕರಹಳ್ಳಿ, ಶ್ರೀ ಎಸ್. ಮಂಜುನಾಥ ಅವರುಗಳು ಬರೆದ ಬರಹಗಳಿವೆ. ಈ ಬರಹಗಳಲ್ಲಿ ವ್ಯಕ್ತವಾಗುವ ಸಾಹಿತ್ಯ ಚಿಂತನೆಯನ್ನು ಶೋಧಿಸಿ ಅಧ್ಯಯನ ಮಾಡುವುದು ಈ ಅಧ್ಯಯನ ಉದ್ದೇಶವಾಗಿದೆ ಮತ್ತು ಇಷ್ಟು ಬರಹಗಳ ವ್ಯಾಪ್ತಿಯನ್ನು ಹೊಂದಿದೆ.

### ಅಧ್ಯಯನದ ವಿಧಾನ

೨೬ ಬರಹಗಾರರ "ನಾನೇಕೆ ಬರೆಯುತ್ತೇನೆ" ಬರಹಗಳನ್ನು ಮಾತ್ರ ಓದಿ ಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಎಲ್ಲಾ ಬರಹಗಳನ್ನು ಓದಿ ಗ್ರಹಿಸಿ ಸಮಾನವಾದ ಅಂಶಗಳನ್ನು ಸಂಗ್ರಹಿಸಿ ಅವುಗಳಲ್ಲಿ ಅಡಗಿರುವ ಸಾಹಿತ್ಯ ಚಿಂತನೆಯನ್ನು ಗುರುತಿಸಲಾಗುವುದು. ಸಮಾನ ಅಂಶಗಳನ್ನು ಗುರುತಿಸಿ ಅಂತಹ ಹತ್ತಾರು ಸಮಾನ ಅಂಶಗಳನ್ನು ಶೋಧಿಸಿ ವಿವರಿಸುವ, ವಿಶ್ಲೇಷಿಸುವ, ವ್ಯಾಖ್ಯಾನಿಸುವ ಪ್ರಯತ್ನ ಇಲ್ಲಿ ಮಾಡಲಾಗುವುದು. ಈ ಬಗೆಯ ಅಧ್ಯಯನಗಳಿಗೆ ಮಾದರಿಗಳಲ್ಲಿ ಇರುವ ಕೆಲವು ಪ್ರಯತ್ನಗಳ ಬೆಂಬಲದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

## ಅಡಿ ಟಿಪ್ಪಣಿಗಳು

೧. ಪ್ರೊ. ಟಿ.ವಿ. ವೆಂಕಟಾಚಲಶಾಸ್ತ್ರೀ (ಸಂ) ಪಂಪ ಸಂಪುಟ, ಪುಟ–೪
೨. ಜಿ.ಎಸ್. ಶಿವರುದ್ರಪ್ಪ: ವಚನಗಳಲ್ಲಿ ಕಾವ್ಯತತ್ವ, ಪುಟ–೧೯
೩. ಜಿ.ಎಸ್. ಶಿವರುದ್ರಪ್ಪ: ಕನ್ನಡ ಕವಿಗಳ ಕಾವ್ಯ ಕಲ್ಪನೆ, ಪುಟ–೭೬
೪. ಅದೇ– ಪುಟ–೯೨
೫. ಅದೇ– ಪುಟ–೨೪

## ಅಧ್ಯಾಯ ೨

## ಸಾಹಿತ್ಯ ಚಿಂತನೆಯ ಮುಖ್ಯ ಆಸಕ್ತಿಗಳು

ಪ್ರಸ್ತುತ ಅಧ್ಯಯನದಲ್ಲಿ ಲೇಖಕರ ಲೇಖನಗಳಲ್ಲಿ ಅಭಿವ್ಯಕ್ತವಾಗಿರುವ ಸಾಹಿತ್ಯ ಚಿಂತನೆಯ ಅಂಶಗಳನ್ನು ಒಂದೆಡೆ ಕ್ರೂಡಿಕರಿಸುವ ಪ್ರಯತ್ನ ಮಾಡಲಾಗಿದೆ. ಈ ಕೆಲಸ ಯಾಕೆ ಮುಖ್ಯ ಹಾಗೂ ಇಂಥ ಪ್ರಯತ್ನಗಳಿಂದ ಆಗುವ ಉಪಯೋಗವೇನು ಎಂಬ ಪ್ರಶ್ನೆಗಳು ಸಹಜವಾಗಿ ಮೂಡುತ್ತದೆ. ಇದಕ್ಕೆ ಪ್ರತಿಯಾಗಿ ಮಹತ್ವದಲ್ಲಿ ಹೇಳಿದ್ದೇನೆ.

ಕನ್ನಡ ಕಾವ್ಯವನ್ನು ಅರ್ಥೈಸಿಕೊಳ್ಳಲು ಕನ್ನಡ ಕಾವ್ಯ ಸ್ವರೂಪವನ್ನು ಕುರಿತು ಚಿಂತಿಸಲು ಸಂಸ್ಕೃತ ಹಾಗೂ ಪಾಶ್ಚಾತ್ಯ ಮೀಮಾಂಸೆಯ ಆಕರಗಳನ್ನೇ ಪ್ರಮುಖವಾಗಿ ಬಳಸುತ್ತಿರುವುದನ್ನು ಕಾಣುತ್ತಿದ್ದೇವೆ. ಇದಕ್ಕೆ ಪ್ರತಿಯಾಗಿ ಕಾವ್ಯ ಮೀಮಾಂಸೆಯ ಕನ್ನಡ ಆಕರಗಳನ್ನು ಕಂಡುಕೊಳ್ಳಲು ಸಾಧ್ಯವಾಗಬಹುದೆಂದು ಹಾಗೂ ಆ ಆಕರಗಳಿಂದ ಕನ್ನಡ ಕಾವ್ಯ ಮೀಮಾಂಸೆಯ ಹಂದರವೊಂದನ್ನು ರೂಪಿಸಿಕೊಳ್ಳಲು ಸಾಧ್ಯವಿದೆಯೆಂದೂ ತೋರುತ್ತದೆ. ಇಂಥ ನಂಬಿಕೆಯು ಈ ಅಧ್ಯಯನದ ಮುಖ್ಯ ಪ್ರೇರಣೆಯಾಗಿದೆ. ಕನ್ನಡ ಕವಿಗಳು ಭಾರತೀಯ ಕಾವ್ಯ ಮೀಮಾಂಸೆಯ ತತ್ವಗಳಿಗೆ ಹೇಗೆ ಪ್ರತಿಕ್ರಯಿಸಿದ್ದಾರೆ. ಹಾಗೂ ಹೇಗೆ ಭಿನ್ನರಾಗುತ್ತಾರೆ. ಎಂಬುದನ್ನು ಗುರುತಿಸುವುದು ಕೂಡಾ ಈ ಅಧ್ಯಯನದ ಇನ್ನೊಂದು ಮುಖ್ಯ ಆಸಕ್ತಿಯಾಗಿದೆ. ಲೇಖನಗಳಿಂದ ಸಾಹಿತ್ಯ ಚಿಂತನೆಯ ಆಶಯಗಳನ್ನು ರೂಪಿಸಿಕೊಳ್ಳುವುದಕ್ಕೆ ಮುನ್ನ ಈ ಅಧ್ಯಯನವು ಕಾವ್ಯ ಮೀಮಾಂಸೆ ಎಂಬ ಪರಿಕಲ್ಪನೆಯ ಬಗೆಗೆ ಹೊಂದಿರುವ ಕೆಲವು ಮುಕ್ಯ ಧೋರಣೆಗಳನ್ನು ಸ್ಪಷ್ಟಗೊಳಿಸುವುದು ಅಗತ್ಯವಾಗಿದೆ.

ಮನುಷ್ಯ ತನ್ನನ್ನು ತಾನು ಹಲವಾರು ಬಗೆಯಲ್ಲಿ ಅಭಿವ್ಯಕ್ತಿಗೊಳಿಸಿಕೊಳ್ಳುತ್ತಾನೆ. ಅದರಲ್ಲಿ ಕಾವ್ಯ ಒಂದು ಬಗೆ. ಈ ಕಾವ್ಯ ಸ್ವರೂಪ ಕುರಿತ ಚರ್ಚೆ ಚಿಂತನಗಳೇ ಕಾವ್ಯ ಮೀಮಾಂಸೆಯ ವಸ್ತು ಕಾವ್ಯ ಮೀಮಾಂಸೆಯು ಕಾವ್ಯದ ಸ್ವರೂಪ, ತತ್ವ ಮತ್ತು ಮೌಲ್ಯ ಮಾಪನಗಳನ್ನು ಕುರಿತ ಅಧ್ಯಯನದ ಶಿಸ್ತು ಆಗಿದೆ. ಕಾವ್ಯದ ಪರಿಕರ, ಪರಿಭಾಷೆ, ಅಭಿವ್ಯಕ್ತಿ ಸ್ವರೂಪದ ಸಮಸ್ಯೆ ಕುರಿತಂತೆ ಸಮಾಲೋಚನೆ ಕೈಗೊಳ್ಳುತ್ತದೆ. ಹಾಗೂ ಕಾವ್ಯ ಪ್ರಪಂಚದ ಮುಖ್ಯ ಆಸಕ್ತಿ ಕೇಂದ್ರಗಳಾದ ಕವಿ, ಸಹೃದಯ ಮತ್ತು ಜಗತ್ತನ್ನು ಕುರಿತು ಚಿಂತಿಸುತ್ತದೆ.

ಎಲ್ಲಾ ಕಾವ್ಯವು ತನ್ನ ಭಾಷೆ ಪರಿಸರ ಮತ್ತು ಸಂಸ್ಕೃತಿಗಳಿಗೆ ಬದ್ಧವಾಗಿರುತ್ತದೆ. ಹಾಗೆಯೇ ಯಾವುದೇ ಕಾವ್ಯ ಮೀಮಾಂಸೆ ತನ್ನ ಪರಿಸರದ ಭಾಷೆಯಲ್ಲಿ ಸೃಷ್ಟಿಯಾದ ಕಾವ್ಯದ ಮೊತ್ತವನ್ನು ಅನುಲಕ್ಷಿಸಿ ಸೃಷ್ಟಿಗೊಳ್ಳುತ್ತದೆ. ಆದ್ದರಿಂದ ಒಂದೊಂದು ಸಂಸ್ಕೃತಿಯ ಮಿಮಾಂಸೆಯೂ ಆಯಾ ಸಂಸ್ಕೃತಿಗೆ ವಿಶಿಷ್ಟವಾಗಿರುತ್ತದೆ. ಆದರೆ ಭಾಷೆ ಅನ್ನುವುದು ಮನುಷ್ಯತ್ವದ ಮುಖ್ಯ ಲಕ್ಷಣವಾದ್ದರಿಂದ ಯಾವುದೇ ಭಾಷೆಯಲ್ಲಿ ಸೃಷ್ಟಿಯಾಗುವ ಕಾವ್ಯ ಕೂಡಾ ಕೆಲವು ಸಾಮಾನ್ಯ ಲಕ್ಷಣಗಳನ್ನು ಹೊಂದಿರುತ್ತದೆ.[೧]

ಚಾಮ್‌ಸ್ಕಿಯಂಥ ಭಾಷಾಶಾಸ್ತ್ರಜ್ಞರು ಭಾಷೆಯ ವಿಶ್ವಾಸಾತ್ಮಕತೆಯ ಬಗ್ಗೆ ಸಾಕಷ್ಟು ಚಿಂತನೆ ನಡೆಸಿದ್ದಾರೆ. ವಾಕ್ಯಗಳ ನಿರ್ಮಾಣ ಮತ್ತು ಅರ್ಥವಂತಿಕೆಯನ್ನು ಸಾಧಿಸುವ ಬಗೆಗಳಲ್ಲಿ ವಿಶ್ವಾಸಾತ್ಮಕ ಅಂಶಗಳನ್ನು ಗುರುತಿಸಲಾಗಿದೆ. ಪ್ರತಿಯೊಂದು ಭಾಷೆಯೂ, 'ಭಾಷೆಯ' ಸಾಧ್ಯತೆಗಳ ಕೆಲವು ಅಂಶಗಳನ್ನು ಅಳವಡಿಸಿಕೊಂಡು ವಿಶಿಷ್ಟವಾಗುತ್ತದೆ. ಎಂಬ ಒಂದು ತಿರ್ಮಾನವು ಲಭಿಸಿದೆ. ಕಾವ್ಯದ ಹಾಗೆಯೇ ಕಾವ್ಯ ಸ್ವರೂಪದ ಚಿಂತನೆ ಕೂಡ ವಿಶಿಷ್ಟ ವಿಶ್ವಾಸಾತ್ಮಕ ಅಂಶಗಳನ್ನು ಒಳಗೊಂಡಿದೆ. ಉದಾಹರಣೆಗೆ ಕಾವ್ಯವಾಚನ ಮಾಡುವಾಗ ಅರ್ಥಕ್ಕೆ ಭಂಗ ಬಾರದೆ ಹಾಗೆ ನಿಲುಗಡೆಯನ್ನು ಎಲ್ಲಿ ಹೇಗೆ ಓದಿಕೊಳ್ಳಬೇಕು ಎಂಬ ಅಂಶ ವಿಶ್ವಾಸಾತ್ಮಕವಾದದ್ದು. ಯಾವುದೇ ಎರಡು ವಸ್ತು ಅಥವಾ ಸಂಗತಿಗಳನ್ನು ಹೋಲಿಸುವ ವಿವಿಧ ಬಗೆಗಳು, ಒಂದು ಕವನದ ಸಂದರ್ಭದಲ್ಲಿ ಮುಂತಾದ ಸಂಗತಿಗಳು ಯಾವುದೇ ಭಾಷೆಯ ಕಾವ್ಯಕ್ಕೆ ಅನ್ವಯಿಸುವಂಥವು.

"ಉಪಮ, ರೂಪಕ, ಶ್ಲೇಷೆಯಂಥ ಭಾಷಿಕ ಸಾಧ್ಯತೆಗಳನ್ನು ಬಳಸಿಕೊಳ್ಳದ ಭಾಷೆ ಮತ್ತು ಕಾವ್ಯ ಇಲ್ಲವೇ ಇಲ್ಲ". (ಫೌಲರ್ -೧೯೮೦) ಎಂಬಂತಹ ಮಾತುಗಳನ್ನು ಗಮನಿಸಬಹುದು. ಆದರೆ ಕಾವ್ಯದ ಬಾಹ್ಯ ಸ್ವರೂಪ, ಅದರ ಉದ್ದೇಶ, ಮೌಲ್ಯ ಮಾಪನಕ್ಕೆ ಆಧಾರವಾಗಿ ಬಳಸಿಕೊಳ್ಳುವ ಸಂಗತಿಗಳು, ಕಾವ್ಯ ಪರಿಣಾಮದ ಬಗ್ಗೆ ತೆಗೆದುಕೊಳ್ಳಲಾಗುವ ನಿಲುವುಗಳು ಸಂಸ್ಕೃತಿಯಿಂದ ಸಂಸ್ಕೃತಿಗೆ ಕಾಲದಿಂದ ಕಾಲಕ್ಕೆ ಭಿನ್ನವಾಗಿರುತ್ತವೆ.

ಮನುಷ್ಯನ ಒಟ್ಟು ಜ್ಞಾನರಾಶಿಯಲ್ಲಿ ಕಾವ್ಯ ಮೀಮಾಂಸೆಗೆ ಯಾವ ಸ್ಥಾನ ನೀಡಬೇಕು? ಮತ್ತು ಕಾವ್ಯ ಮಿಮಾಂಸೆಗಳು ಇತರ ಶಾಖೆಗಳಿಗೂ ಇರುವ ಸಂಬಂಧ ಯಾವ ಬಗೆಯದು ಎಂಬ ಬಗ್ಗೆ ಸಂಸ್ಕೃತ ಮತ್ತು ಪಾಶ್ಚಾತ್ಯ ಭಾಷೆಗಳಲ್ಲಿ ಬೇರೆ ಬೇರೆಯದೇ ಆದ ಧೋರಣೆಗಳು ಕಾಣುತ್ತವೆ.

"ಲೇಖನ- ಭಾಷಣ, ಉಕ್ತಿ ಚಮತ್ಕಾರಗಳನ್ನು ವಿಭಜನೆಮಾಡುವ ಅಲಂಕಾರ ಶಾಸ್ತ್ರ, ಕಾವ್ಯದ ತಿರುಳನ್ನು ಅದರ ನಿರ್ಮಾಣ ಕ್ರಮವನ್ನು ನಿರೂಪಿಸುವ ಕಾವ್ಯ ಸ್ವರೂಪವನ್ನು ವಿಚಾರ ಲಲಿತಕಲೆಗಳಿಗೂ ಸಮಾನವಾಗಿರುವ ಸೌಂದರ್ಯ ಸ್ವರೂಪವನ್ನು ವಿಚಾರ ಮಾಡುವ ಸೌಂದರ್ಯ ಮೀಮಾಂಸೆ (RHETO RICS POETICS, AESTHETICS)[೨] ಮೂರು ಶಾಸ್ತ್ರಗಳು ಪಾಶ್ಚಾತ್ಯರಲ್ಲ ಬೇರೆ ಬೇರೆಯಾಗಿ ಬೆಳೆದು ಬಂದಿವೆ. ಹಾಗೂ ಕೊನೆಯದು ತತ್ವಶಾಸ್ತ್ರದ ಅಂಗವಾಗಿ ಬರುತ್ತದೆ. ನಮ್ಮ ದೇಶದಲ್ಲಿ ಅಲಂಕಾರ ವಿಭಜನೆ, ಕಾವ್ಯಮೀಮಾಂಸೆಯ

ಸೌಂದರ್ಯದರ್ಶನ ಬೇರೆಬೇರೆ ಶಾಸ್ತ್ರಗಳೆಂದು ಭಾವಿಸಿ ನಿರೂಪಿಸುವ ಪದ್ಧತಿಬರಲಿಲ್ಲ. ಕಾವ್ಯ ತತ್ವ ಸಮಾಲೋಚನೆಯ ಅಂಗವಾಗಿಯೇ ಅನುಪ್ರಾಸ, ಉಪಮ ಮೊದಲಾದ ಅಲಂಕಾರಗಳ ವ್ಯವಸ್ಥೆ ನಡೆಯಿತು. ಕಾವ್ಯದಲ್ಲಿ ರಮಣೀಯತೆಯುಂಟು ಮಾಡುವ ಅಂಶಗಳೆಲ್ಲವನ್ನು ಅಲಂಕಾರಗಳೆಂದು ಕರೆದರು. ಶಬ್ದಾರ್ಥಲಂಕಾರವನ್ನು ಮುಖ್ಯವಾಗಿ ಗಮನಿಸಿದ್ದು ಸೌಂದರ್ಯವೆಂಬ ವಿಶಾಲಾರ್ಥದಲ್ಲಿಯೇ ಚಿಂತನೆಗಳಿದ್ದವು. ಆದ್ದರಿಂದಲೇ ಅಲಂಕಾರ ಶಾಸ್ತ್ರ ಕಾವ್ಯ ಮೀಮಾಂಸೆ ಈ ಎರಡು ನಮ್ಮಲ್ಲಿ ಸಮಾನಾರ್ಥಕ ಶಬ್ದಗಳಾಗಿ ನಿಂತಿವೆ."

ಕಾವ್ಯವನ್ನು ಕುರಿತಂತೆ ತಾಳುವ ನಿಲುವುಗಳ ಆಧಾರದ ಮೇಲೆ ಕಾವ್ಯ ಮೀಮಾಂಸೆಯನ್ನು ವಿವಿಧ ರೀತಿಗಳಲ್ಲಿ ವರ್ಗೀಕರಿಸಬಹುದು. ಸಂಪ್ರದಾಯಕವಾಗಿ ಕಾವ್ಯ ಮೀಮಾಂಸೆಯ ವಿವಿಧ ಪ್ರಸ್ತಾನಗಳನ್ನು ಕಾಲಾನುಕ್ರಮದಲ್ಲಿ ಗುರುತಿಸುವುದುಂಟು ಈ ಮಾದರಿಯಲ್ಲಿ ಚಾರಿತ್ರಿಕ ಕಾಲಾನುಕ್ರಮಣಿಕ ನಿರ್ಣಾಯಕ ಅಂಶವಾಗಿರುತ್ತದೆ.[೩] ಇದಕ್ಕೆ ಪ್ರತಿಯಾಗಿ ಆಧುನಿಕ ರೀತಿಯಲ್ಲಿ ಯಾವುದೇ ಕಾಲದ ಕಾವ್ಯ ಮೀಮಾಂಸೆಯ ಪ್ರಮುಖ ಆಸಕ್ತಿ ಕೇಂದ್ರವನ್ನು ಗಮನದಲ್ಲಿಟ್ಟುಕೊಂಡು ಕಾವ್ಯ ಮೀಮಾಂಸೆಯನ್ನು ವರ್ಗೀಕರಿಸಬಹುದು. ಮೂರನೆಯದಾಗಿ ಭಾಷಿಕ ಸಂವಹನೆಯ ಮಾದರಿಯನ್ನು ಆಧಾರವಾಗಿಟ್ಟುಕೊಂಡು ಕಾವ್ಯ ಮೀಮಾಂಸೆಯನ್ನು ವರ್ಗೀಕರಿಸುವ ಸಾಧ್ಯತೆಯೂ ಇದೆ.

ಅಲಂಕಾರ, ರೀತಿ, ರಸ, ಧ್ವನಿ, ಪ್ರಸ್ಥಾನಗಳ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯನ್ನು ಗ್ರಹಿಸುವುದು ಸಾಂಪ್ರದಾಯಿಕವಾಗಿದೆ. ಒಂದೇ ಸಂಸ್ಕೃತಿಯಲ್ಲಿ ಕಾಲದಿಂದ ಕಾಲಕ್ಕೆ ನಿಲುವುಗಳು ಬದಲಾದಂತೆ ಬೇರೆ ಬೇರೆ ಪ್ರಸ್ಥಾನಗಳು ಹುಟ್ಟಿಕೊಳ್ಳುತ್ತದೆ.

ಕಾವ್ಯ ಸ್ವರೂಪ ಮತ್ತು ಕಾವ್ಯದ ಅಂತಸ್ಸತ್ವ ಕುರಿತ ವಿಚಾರಗಳು ನಿಲುವುಗಳು ಬದಲಾದದ್ದೇ ಸಂಸ್ಕೃತ ಕಾವ್ಯ ಮಿಮಾಂಸೆಯಲ್ಲಿ ವಿಭಿನ್ನ ಪ್ರಸ್ಥಾನಗಳು ಹುಟ್ಟಿಕೊಳ್ಳಲು ಕಾರಣವಾಗಿದೆ. ತೀ.ನಂ.ಶ್ರೀ., ಕೆ. ಕೃಷ್ಣಮೂರ್ತಿ, ರಾಘವನ ಮುಂತಾದವರು ಈ ಮಾದರಿಯ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯ ವಿಚಾರಗಳನ್ನು ಕಟ್ಟಿ ಕೊಡುತ್ತಾರೆ.

ಕಾವ್ಯ ಮೀಮಾಂಸೆಯ ಕಾವ್ಯ ಪ್ರತಿಕ್ರಿಯೆಯ ಯಾವ ಅಂಶಕ್ಕೆ ಅವಧಾರಣೆ ನೀಡಿದೆ ಎಂಬುದನ್ನು ಆಧರಿಸಿ ಕಾವ್ಯ ಮೀಮಾಂಸೆಯನ್ನು ನಾಲ್ಕು ಪ್ರಮುಖ ಶಾಖೆಗಳಾಗಿ ವಿಂಗಡಿಸಿರುವುದನ್ನು ಕಾಣಬಹುದು. ಎಂ. ಹೆಚ್. ಅಬ್ರಾಂಸ್ ಮತ್ತು ಅವನ ವಿಚಾರಗಳನ್ನು ಅನುಸರಿಸಿದ ಕೆ.ವಿ. ನಾರಾಯಣರ (ಬೇಂದ್ರೆ ಕಾವ್ಯ ದೃಷ್ಟಿ : ೧೯೮೪) ವಿಚಾರಗಳು ಈ ಬಗೆಯ ವಿಂಗಡನೆಯ ನಿದರ್ಶನಗಳು ಕವಿ ಕೇಂದ್ರಿತ, ವಾಚಕ ಕೇಂದ್ರಿತ, ಕೃತಿ ಕೇಂದ್ರಿತ, ಮಧ್ಯಮ ಕೇಂದ್ರಿತವೆಂದು ವಿಂಗಡಿಸುವ ಈ ಕ್ರಮ ಚಾರಿತ್ರಿಕ ಕಾಲಕ್ರಮಕ್ಕಿಂತ ಧೋರಣೆಗಳಿಗೆ ಪ್ರಾಮುಖ್ಯ ನೀಡುತ್ತದೆ.[೪]

ಕವಿ ಕೇಂದ್ರಿತ ಕಾವ್ಯ ಮೀಮಾಂಸೆಯು ಇಡೀ ಕಾವ್ಯ ಪ್ರತಿಕ್ರಿಯೆಯಲ್ಲಿ ಕವಿಗೆ ಪ್ರಮುಖ ಸ್ಥಾನ ನೀಡುತ್ತದೆ. ಕಾವ್ಯವೆಂಬುದು ಕವಿಯಕರ್ಮ, ಕಾವ್ಯದ ಅರ್ಥವಂತಿಕೆಯಲ್ಲಿ ಕವಿಯ ಉದ್ದೇಶಕ್ಕೆ ಪ್ರಮುಖ ಸ್ಥಾನವಿದೆ ಎಂದು ಈ ಬಗೆಯ ಕಾವ್ಯ ಮೀಮಾಂಸೆ ನಂಬುತ್ತದೆ.

ಪ್ರತಿಭೆ, ಸ್ಫೂರ್ತಿ, ಕಲ್ಪನೆ ಎಂಬ ಪರಿಕಲ್ಪನೆಗಳು ಈ ಬಗೆಯ ಕಾವ್ಯ ಮೀಮಾಂಸೆಯಲ್ಲಿ ಪ್ರಮುಖವಾಗಿರುತ್ತವೆ. ಹಾಗೂ ಕವಿಯಮೇಲಾದ ಪ್ರಭಾವ, ಅವನು ಮಾಡಿಕೊಳ್ಳಬೇಕಾಗುವ ಸಿದ್ಧತೆಗಳಿಗೂ ಈ ಬಗ್ಗೆಯ ಕಾವ್ಯ ಮೀಮಾಂಸೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಕವಿಶಕ್ಷಾ, ಕವಿಜಹ್ವಾ ಬಂಧನದಂಥ ಕೃತಿಗಳನ್ನು ರಾಜಶೇಖರರ ಪ್ರತಿಭೆಯನ್ನು ಕುರಿತು ಮಂಡಿಸಿರುವ ವಿಚಾರಗಳನ್ನು ಕವಿ ಕೇಂದ್ರಿತ ಕಾವ್ಯ ಮೀಮಾಂಸೆಯ ವಿಚಾರಗಳಿಗೆ ನಿದರ್ಶನಗಳೆಂದು ಭಾವಿಸಬಹುದು. ಓದುಗ ಕೇಂದ್ರಿತ ಮೀಮಾಂಸೆಯಲ್ಲಿ ಓದುಗನ ಮೇಲೆ ಕಾವ್ಯದಿಂದುಂಟಾಗುವ ಪರಿಣಾಮಕ್ಕೆ ಮಹತ್ವ ನೀಡಲಾಗುತ್ತದೆ. ಕೃತಿಯ ಅರ್ಥವನ್ನು ಓದುಗ ಸ್ವತಂತ್ರವಾಗಿ ಕಲ್ಪಿಸಿಕೊಳ್ಳಬಲ್ಲ ಎಂಬಂಥ ವಿಚಾರವನ್ನು ಸ್ಪಷ್ಟಪಡಿಸುತ್ತದೆ. ಓದುಗ ಸಂವೇದನೆಯ ಬಗೆಗಳನ್ನು ಪ್ರಮುಖವಾಗಿ ವಿಶ್ಲೇಷಿಸುತ್ತವೆ. ಧ್ವನಿ ಪ್ರಸ್ಥಾನದ ಚರ್ಚೆಗಳಲ್ಲಿ ರೀಡರ್ಸ್ ರೆಸ್‌ಫಾನ್ಸ್ ಥಿಯರಿಗಳಲ್ಲಿ ಓದುಗನ ಪಾತ್ರಕ್ಕೆ ಪ್ರಾಮುಖ್ಯ ಸಂದಿದೆ. ರಾಜಶೇಖರನು ಕಾರಯಿತ್ರಿ– ಭಾವಯಿತ್ರಿ– ಪ್ರತಿಭೆ ಎಂದು ಎರಡು ಭಾಗಮಾಡಿ ವಿಶ್ಲೇಷಿಸುವಾಗಲೂ ಕೂಡ ಒದುಗನ ಮನಸ್ಸಿನ ಪ್ರತಿಕ್ರಿಯೆಗಳನ್ನು ಗುರುತಿಸುತ್ತಾನೆ.

ಕೃತಿ ಕೇಂದ್ರಿತ ಮೀಮಾಂಸೆಯು ಕೃತಿಯ ಸ್ವರೂಪ ಕುರಿತು ಹೆಚ್ಚಿನ ಗಮನ ನೀಡುತ್ತದೆ. ಕೃತಿಯ ಒಂದೊಂದು ಅಂಗ ಅಥವಾ ಅಂಶಗಳ ಕುರಿತು ವಿಶ್ಲೇಷಣೆ ಮಾಡುತ್ತದೆ. ಸಂರಚನಾವಾದಿಗಳ ವಿಮರ್ಶೆ ಅಥವಾ ಚಿಂತನೆ ಈ ಬಗೆಯದು ಅರಿಸ್ಟಾಟಲನ ಕಾವ್ಯ ಮೀಮಾಂಸೆ ಕೃತಿಯೊಂದರ ವಿವಿಧ ಅಂಶಗಳನ್ನು ಅವುಗಳ ಪರಸ್ಪರ ಸಂಬಂಧವನ್ನು ಚರ್ಚಿಸುವುದನ್ನು ಗಮನಿಸಬಹುದು.

ಮಾಧ್ಯಮ (ಭಾಷಾ) ಕೇಂದ್ರಿತ ಮೀಮಾಂಸೆಯು ಕಾವ್ಯದ ಮಾಧ್ಯಮ ವಾಗಿರುವ ಭಾಷೆಗೆ ಪ್ರಾಮುಖ್ಯ ನೀಡುತ್ತದೆ. ಕಾವ್ಯವನ್ನು ಭಾಷೆಯ ಸಾಮರ್ಥ್ಯದ ಒಂದು ಸಾಧ್ಯತೆಯೊಂದು ಗುರುತಿಸುತ್ತದೆ. ಯಾವ ಯಾವ ಬಗೆಯ ಭಾಷೆ ಯಾವ ಬಗೆಯ ಪರಿಣಾಮ ಬೀರುತ್ತದೆ ಎಂದು ಚರ್ಚಿಸುತ್ತಲೇ ಕಾವ್ಯದ ಮೌಲ್ಯ ಮಾಪನಕ್ಕೆ ಕವಿಯ ಭಾಷಾ ಬಳಕೆಯನ್ನೇ ಪ್ರಮುಖ ಮಾನದಂಡವಾಗಿ ಮಾಡಿಕೊಳ್ಳುತ್ತದೆ.

ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಅಲಂಕಾರ ಪ್ರಸ್ಥಾನ, ರೀತಿ ಪ್ರಸ್ಥಾನಗಳು ಪಾಶ್ಚಾತ್ಯರಲ್ಲಿ ಬಂದಂಥ ನ್ಯೂಕ್ರಿಟಿಸಿಸಂ ಈ ಹಿನ್ನಲೆಯಲ್ಲಿಯೇ ಮೂಡಿದಂಥದು, ರೋಮನ್ ಜಾಕ್‌ಸನ್ ಸಂವಹನೆಯ, ಆರು ಬಗೆಯ ಹಂತಗಳನ್ನು ಗುರುತಿಸಿ ಕಾವ್ಯ ಮೀಮಾಂಸೆ ಕಟ್ಟಿ ಕೊಡಲು ಪ್ರಯತ್ನಿಸುತ್ತಾನೆ. ೧–ವತ್ಯ, ೨.ಶೋತ್ಯ, ೩. ಮಾಧ್ಯಮ, ೪. –ಸಂಗತಿ, ೫.– ಸಂದರ್ಭ , ೬. ಕೋಡ್, ಈ ಅಂಶಗಳನ್ನು ಆಧರಿಸಿಯೂ ಕಾವ್ಯ ಮೀಮಾಂಸೆಯನ್ನು ವರ್ಗಿಕರಿಸಲು ಸಾಧ್ಯವಿದೆ. ಇಂಥ ಎಲ್ಲ ವರ್ಗೀಕರಣಗಳು ಕೇವಲ ಅಧ್ಯಯನದ ಅನುಕೂಲಕ್ಕೆಂದೇ ರೂಪಗಳ್ಳುವಂಥವು.[೫] ಯಾವುದೇ ಕಾವ್ಯ ಮೀಮಾಂಸೆ ಶುದ್ಧಾಂಗವಾಗಿ ಯಾವುದಾದರೊಂದು ಮಾತ್ರವೇ ಆಗಿರುವುದು ಸಾಧ್ಯವಿಲ್ಲ. ಎಂಬ ಮಾತನ್ನು ಮರೆಯುವಂತಿಲ್ಲ.

ಕಾವ್ಯ ಮೀಮಾಂಸೆ ಒಂದು ಶಿಸ್ತಾಗಿ ಬೆಳೆಯುವಾಗ ಎರಡು ಪ್ರಮುಖವಾದ ಧೋರಣೆಗಳ

ಒಳಗೊಂಡಿರುವುದು ಕಾಣಬಹುದು. ಒಟ್ಟು ಕಾವ್ಯವನ್ನು ಅನುಕರಣೆ ಎಂದು ನೋಡುವ ದೃಷ್ಟಿಕೋನ ಮತ್ತೊಂದು ಕಾವ್ಯ ಅನುಕರಣೆಯಲ್ಲಿ ಸ್ವಂತವಾದ ಪ್ರತಿಭೆಯನ್ನು ಹೊಂದಿರುವ ವಾಸ್ತವತೆವೆಂದು ನೋಡುವುದು ಕಾವ್ಯ ಮೀಮಾಂಸೆ ಸತ್ಯ ಮತ್ತು ವಾಸ್ತವಗಳ ಸ್ವರೂಪವನ್ನು ತನ್ನದೇ ಆದ ರೀತಿಯಲ್ಲಿ ವಿವರಿಸಲು, ಗ್ರಹಿಸಲು ಪ್ರಯತ್ನಿಸುತ್ತದೆ. ಹಾಗಾಗಿ ಇದು ತತ್ವಶಾಸ್ತ್ರದ ಒಂದು ಭಾಗವಾಗಿರುತ್ತದೆ. ಹಾಗೂ ಇದು ಪ್ರತ್ಯೇಕ ಸಂಕಥನ ಅಥವಾ ಶಾಸ್ತ್ರವಾಗಿ ಬೆಳೆಯುತ್ತಾ ತನ್ನದೇ ಆದ ಪಾರಿಭಾಷಿಕ ಸಮೂಹ ಬೆಳೆಸಿಕೊಳ್ಳುತ್ತದೆ ಮತ್ತು ತನ್ನ ವಿಚಾರ ಮಂಡನೆಯ ವಿಧಾನಗಳನ್ನು ಬೆಳೆಸಿಕೊಳ್ಳುತ್ತದೆ. ಉದಾ: ಸಂಸ್ಕೃತ ಕಾವ್ಯ ಮೀಮಾಂಸೆಯು ತನ್ನ ಲಕ್ಷಣ ನಿರೂಪಣೆಯನ್ನು ನಿದರ್ಶನ, ಪೂರ್ವ ಪಕ್ಷವಾದದ ಮಂಡನೆಗಳ ಕುರಿತಂತೆ ತನ್ನದೇ ಆದ ಪದ್ಧತಿ ಬೆಳೆಸಿ ಕೊಂಡಿರುವುದನ್ನು ಕಾಣಬಹುದು. ಹೀಗೆ ಯಾವುದೇ ಅಧ್ಯಯನದ ಶಿಸ್ತು ತನ್ನದೇ ಆದ ಪರಿಷ್ಕೃತವಾದ ಭಾಷೆಯನ್ನು ಬೆಳೆಸಿಕೊಂಡಾಗ ಅದನ್ನು "ಆದಿಭಾಷೆ" ಅಥವಾ "ಮೆಟಾಲ್ಯಾಂಗ್ವೇಜ್" ಎಂದು ಗುರಿತಿಸಲಾಗುತ್ತದೆ.[೬]

ಕಾವ್ಯ ಮೀಮಾಂಸೆಯ ಮಾತ್ರವಲ್ಲದೆ ಇತರ ಶಾಸ್ತ್ರಗಳು ಸಂಸ್ಕೃತದಲ್ಲಿ ಸಮೃದ್ಧವಾಗಿ ಬೆಳೆದವು. ಆ ಶಾಸ್ತ್ರಗಳ ವಿಷಯವನ್ನು ಪರಿಭಾಷೆಗಳನ್ನು ಮತ್ತು ಆಯಾ ಶಾಸ್ತ್ರಕ್ಕೆ ಸಂಬಂಧಿಸಿದ ಪ್ರಾದೇಶಕ ಭಾಷೆಗಳು ಅನುವಾದ ಮಾಡಿಕೊಂಡವು. ಹೀಗೆ ಅನುವಾದ ಮಾಡಿಕೊಂಡಾಗ ಕೂಡಾ ತಮ್ಮ ತಮ್ಮ ಭಾಷೆಯ ಕಾವ್ಯಕ್ಕೆ ವಿಶಿಷ್ಟವಾಗಿರುವ ವಿಚಾರ ಹಾಗು ಸಮಸ್ಯೆಗಳನ್ನು ಕಾವ್ಯದ ಮತ್ತು ಕಾವ್ಯ ಮೀಮಾಂಸೆಯ ಭಾಗವಾಗಿ ಪರಿಗಣಿಸಿದ್ದು ಉಂಟು. ಮಾರ್ಗ, ದೇಸಿಯನ್ನು ಕುರಿತ ಚರ್ಚೆಯನ್ನು ಇಂಥ ಸಂಗತಿಗಳಿಗೊಂದು ಉದಾಹರಣೆ ಎನ್ನಬಹುದು. ಇಂಥ ಸಂಗತಿಗಳ ವಿವರವಾದ ಪರಿಶೀಲನೆಯನ್ನು ಮುಂದಿನ ಅಧ್ಯಾಯದಲ್ಲಿ ಎತ್ತಿಕೊಳ್ಳಲಾಗಿದೆ.

ಭಾಷೆಯ ಬಳಕೆ, ಧೋರಣೆ, ನಿರ್ದಿಷ್ಠ ಪ್ರಕಾರದ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಲೇಖನಗಳನ್ನು ಕಾವ್ಯಮೀಮಾಂಸೆಯ ದೃಷ್ಠಿಯಿಂದ ಪರೀಶಿಲಿಸುವುದು ಉಪಯುಕ್ತವಾಗುತ್ತದೆ. ಈ ಕಾರ್ಯಕ್ಕೆ ನೇರವಾಗಿ ತೊಡಗುವ ಮೊದಲು ಕನ್ನಡದ್ದೇ ಆದ ಕಾವ್ಯ ಮೀಮಾಂಸೆಯನ್ನು ಅಥವಾ ಕಾವ್ಯ ಮೀಮಾಂಸೆಗೆ ಕನ್ನಡದಲ್ಲಿ ನಡೆದಿರುವ ಅಧ್ಯಯನಗಳ ಸ್ಥೂಲ ಸಮಿಕ್ಷೆ ನಡೆಸುವುದು ಉಚಿತವಾಗುತ್ತದೆ.

# ಅಡಿ ಟಿಪ್ಪಣಿಗಳು

೧. ಜಿ.ಎಸ್. ಶಿವರುದ್ರಪ್ಪ: ಕನ್ನಡ ಕವಿಗಳ ಕಾವ್ಯ ಕಲ್ಪನೆ, ಪುಟ–೧೭

೨. ಎಂ.ವಿ. ಸೀತಾರಾಮಯ್ಯ: ಕವಿರಾಜ ಮಾರ್ಗಂ, ಪುಟ–೭೦

೩. ಕೆ. ವಿ. ನಾರಾಯಣ: ಬೇಂದ್ರೆ ಕಾವ್ಯದೃಷ್ಟಿ, ಪುಟ–೨೬

೪. ತಿ.ನಂ.ಶ್ರೀ: ಭಾರತೀಯ ಕಾವ್ಯ ಮೀಮಾಂಸೆ, ಪುಟ–೭

# ಅಧ್ಯಾಯ ೩

# "ಕನ್ನಡ ಸಾಹಿತ್ಯ ಚಿಂತನೆ ಕುರಿತ ಅಧ್ಯಯನಗಳು"

ಸಾಹಿತ್ಯ ಚಿಂತನೆಗೆ ಕನ್ನಡ ಚಿಂತಕರು ನೀಡಿರುವ ಕೊಡುಗೆಗಳನ್ನು ಕುರಿತು ಪುಸ್ತಕಗಳ ಹಿನ್ನೆಲೆಯಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳ ಸ್ಥೂಲ ಸಮೀಕ್ಷೆಯನ್ನು ನೋಡಬಹುದು. "ನಾನೇಕೆ ಬರೆಯುತ್ತೇನೆ" ಎಂಬ ಲೇಖನಗಳಲ್ಲಿ ಚಿಂತನೆಗಳನ್ನು ಗಮನಿಸಲಾಗಿ ಇದು ವಿಸ್ತೃತ ಚಿಂತನೆಯ ಭಾಗವಾಗಿ ಮೂಡಿವೆ. ಹೀಗೆ ವ್ಯಕ್ತಿವಾಗಿರುವ ಅಭಿಪ್ರಾಯ ಮತ್ತು ಪ್ರೇರಣೆ, ಧೋರಣೆಗಳು ಒಟ್ಟಾರೆಯಾಗಿ ಕನ್ನಡ ಕಾವ್ಯ ಮೀಮಾಂಸೆಯನ್ನು ಕಟ್ಟಿಕೊಳ್ಳುವ ಪ್ರಯತ್ನ ಒಂದರ ಪೂರ್ವಸಿದ್ಧತೆ ಎಂಬಂತೆ ತೋರುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಸೂಕ್ತ ಹಿನ್ನೆಲೆಯೊಂದನ್ನು ಕಲ್ಪಿಸಿಕೊಳ್ಳುವ ಉದ್ದೇಶದಿಂದ ಈ ಬಗೆಯ ಮುಖ್ಯ ಕೃತಿಗಳನ್ನು ಈ ಅಧ್ಯಯದಲ್ಲಿ ಗಮನಿಸಲಾಗಿದೆ.

### ಶ್ರೀ ತೀ.ನಂ. ಶ್ರೀಕಂಠಯ್ಯ ಭಾರತೀಯ ಕಾವ್ಯ ಮೀಮಾಂಸೆ-೧೯೫೩

ಕನ್ನಡದಲ್ಲಿ ಸಾಹಿತ್ಯ ಚಿಂತನೆಯ ವಿಚಾರವನ್ನು ಕುರಿತು ಹೇಳುವಲ್ಲಿ ಮೊಟ್ಟ ಮೊದಲು ಗಮನಿಸಬೇಕಾದದ್ದು. "ಭಾರತೀಯ ಕಾವ್ಯ ಮೀಮಾಂಸೆಯನ್ನು ಸಂಸ್ಕೃತ ಭಾಷೆಯಲ್ಲಿ ಕಾವ್ಯ ಲಕ್ಷಣ ಗ್ರಂಥಗಳನ್ನು ಪ್ರಧಾನವಾಗಿ ಅವಲಂಬಿಸಿ ಇದು ರಚಿತವಾಗಿದೆ. ಕನ್ನಡದಲ್ಲಿ ದೊರೆಯುವ ಲಕ್ಷಣ ಗ್ರಂಥಗಳನ್ನು ಕುರಿತು ಪರಿಶಿಷ್ಟದಲ್ಲಿ ಒಂದು ಅಧ್ಯಯನವನ್ನು ಕೊಡಲಾಗಿದೆ. ಈ ಗ್ರಂಥ ಮೂರು ಭಾಗಗಳಲ್ಲಿ ವಿಸ್ತೃತವಾಗಿವೆ.

ಮೊದಲನೆಯ ಭಾಗದಲ್ಲಿ-ಅಲಂಕಾರಶಾಸ್ತ್ರದ ಬೆಳೆವಣಿಗೆ

ಎರಡನೆಯ ಭಾಗದಲ್ಲಿ-ಕವಿ, ಕಾವ್ಯ, ಸಹೃದಯ ವಿಚಾರ

ಮೂರನೆಯ ಭಾಗದಲ್ಲಿ-ರಸ, ಧ್ವನಿ, ವಿಚಾರ ನಿರೂಪಿತವಾಗಿದೆ.[೧]

ಭಾರತೀಯ ಕಾವ್ಯ ಮೀಮಾಂಸೆ ಎಲ್ಲಾ ಮುಖ್ಯ ವಿಚಾರಗಳನ್ನು ಹೇಳಿಕೆಗಳಿಗೆ ವಿರೋಧವಾಗದ ರೀತಿಯಲ್ಲಿ ಅತ್ಯಂತ ಪ್ರಾಮಾಣಿಕವಾಗಿ, ಸರಳವಾಗಿ ಹಾಗೂ ಸರಸವಾಗಿ ನಿರೂಪಿಸುತ್ತದೆ. ತೀ.ನಂ.ಶ್ರೀ ಯವರ ಅಗಾದವಾದ ವಿದ್ವತ್ತು ಸೂಕ್ಷ್ಮಸಂವೇದನಾಶೀಲವಾದ

ಕವಿಹೃದಯ ಸತ್ಯ ಪಕ್ಷಪಾತಿಯಾದ ವಿಮರ್ಶನ ದೃಷ್ಟಿ ಅಕೃತವಾದ ನಿರುಪಣಾ ಸಾಮರ್ಥ್ಯ ಇವುಗಳಿಗೆ ಈ ಗ್ರಂಥ ಸಾಕ್ಷಿಯಾಗಿದೆ. ವಿಷಯ ವಿಂಗಡನೆ, ವಿಷಯ ಪ್ರತಿಪಾದನೆ ಮೂಲದಲ್ಲಿ ಸೂಚನೆಯ ರೂಪದಲ್ಲಿರುವ ಸಂಗತಿಗಳನ್ನು ಸ್ಫೂಟವಾಗಿ ವಿವರಿಸುವ ಸೊಗಸು ಮೂಲ ಲಾಕ್ಷಣಿಕರ ಮತ ತಮಗೆ ಒಪ್ಪಿಗೆಯಾಗದೆ ಇದ್ದಲ್ಲಿ ತಾವು ಅದರಿಂದ ಭಿನ್ನವಾಗಿ ನಿಲ್ಲುವ ಸೌಜನ್ಯಯುತವಾದ ನಿಲುವು, ನಿದರ್ಶನಕ್ಕಾಗಿ ಎತ್ತಿಕೊಳ್ಳುವ ದೃಷ್ಟಾಂತ, ಕಾವ್ಯಭಾಗಗಳ ಆಯ್ಕೆಯಲ್ಲಿ ಕಂಡು ಬರುವ ಅಭಿರುಚಿ ಮತ್ತು ರಸಿಕತೆ, ಸಾಂಸ್ಕೃತಿಕ, ಕಾವ್ಯ ಲಕ್ಷಣಗಳನ್ನು, ಕವಿ ಸೂಕ್ತಿಗಳನ್ನು ಕನ್ನಡಿಸುವ ಸಾಮರ್ಥ್ಯ ಇಲ್ಲಿ ಅವರು ದೃಷ್ಟಾಂತಕ್ಕೆಂದು ಪ್ರಾಕೃತ ಹಾಗೂ ಸಂಸ್ಕೃತ ಕವಿಗಳಿಂದ ಅನುವಾದ ಮಾಡಿರುವ ಕಾವ್ಯ ಭಾಗಗಳನ್ನು ಪ್ರತ್ಯೇಕಿಸಿ ಪ್ರಕಟಿಸಿದರೆ ಸೊಗಸಾಗಿ ಕವನ ಸಂಗ್ರಹವಾಗುತ್ತದೆ.

ಭಾರತೀಯ ಕಾವ್ಯ ಮೀಮಾಂಸೆಯೊಂದಿಗೆ ಸಂವಾದಿಯಾಗಬಹುದಾದ ಪಾಶ್ಚಾತ್ಯ ತತ್ವಗಳನ್ನು ಸೂಕ್ಷ್ಮವಾಗಿ ಸೂಚಿಸುವ ವಿಧಾನ ಕನ್ನಡ ಕಾವ್ಯಗಳಿಂದಲೂ ಪಂಪನಿಂದ ಹಿಡಿದು ಜನಪದ ಸಾಹಿತ್ಯದ ತನಕ ನಿದರ್ಶನಗಳನ್ನು ಕೊಟ್ಟು ವಿಷಯದೊಂದಿಗೆ ಆತ್ಮೀಯತೆಯನ್ನು ಹೆಚ್ಚಿಸುವ ವಿಧಾನ ಅತ್ಯಂತ ಗಹನವಾದ ತತ್ವಾಂಶಗಳನ್ನು ಸಂದೇಹಕ್ಕೆಡೆಯಿಲ್ಲದಂತೆ ರಮ್ಯವಾಗಿ ತಿಳಿಯ ಪಡಿಸುವ ಜಾಣ್ಮೆ ಇವುಗಳಿಂದ ಈ ವಿದ್ವತ್ ಕೃತಿ ಓದುವವರ ಮನಸ್ಸಿಗೆ ಆಯಾಸವಾಗದೆ ಬುದ್ದಿ, ಮನಸ್ಸುಗಳ ವಿಕಾಸೋಲ್ಲಾಸಗಳನ್ನು ಸಾಧಿಸುತ್ತದೆ.

"ಭಾರತೀಯ ಕಾವ್ಯ ಮೀಮಾಂಸೆ" ಮುಖ್ಯವಾಗಿ ಕಾವ್ಯ ಸ್ವರೂಪ ಹಾಗು ಕಾವ್ಯಾನುಭವದ ವಿವರಣೆಯ ಕಡೆಗೆ ತನ್ನ ಗಮನವನ್ನು ಕೇಂದ್ರಿಕರಿಸಿತು. ಒಳ್ಳೆಯ ಕೃತಿ ರಚನೆ ಮಾಡಬೇಕಾದರೆ ಕವಿಗಳು ಅನುಸರಿಸಬೇಕಾದ ವಿಧಾನಗಳು ಯಾವುವು, ಕಾವ್ಯದ ವಸ್ತು ಹೇಗಿರಬೇಕು, ರಸ ಸಂಯೋಜನೆ ಹೇಗಿರಬೇಕು, ಯಾವುದನ್ನು ವಿಸ್ತರಿಸಬೇಕು, ಯಾವುದನ್ನು ಮೊಟಕುಗೊಳಿಸಬೇಕು, ಇರಿಸಿಕೊಳ್ಳಬೇಕಾದ ಗುಣಗಳು ಯಾವುವು, ನಿವಾರಿಸಿಕೊಳ್ಳಬೇಕಾದ ದೋಷಗಳು ಯಾವುವು ಇತ್ಯಾದಿ ಸಂಗತಿಗಳನ್ನು ನಿದರ್ಶನ ಸಹಿತವಾಗಿ ಚರ್ಚಿಸುವುದರ ಮೂಲಕ ಉತ್ತಮ ಕೃತಿಯನ್ನು ರಚಿಸುವುದು ಹೇಗೆ ಎಂಬುದನ್ನು ಕವಿಗಳಿಗೆ ತಿಳಿಯ ಹೇಳುವ "ಕವಿಶಿಕ್ಷೆ" ಕವಿಶಿಕ್ಷೆಯೇ ಭಾರತೀಯ ಕಾವ್ಯ ಮೀಮಾಂಸೆಯ ಮುಖ್ಯ ಉದ್ದೇಶವಾಯಿತು. ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಒಂದು ಉತ್ತಮ ಕೃತಿ ರಚಿತವಾದರೆ ಸಹೃದಯನಾದವನು ಅದನ್ನು ಕುರಿತು ಚರ್ಚೆ ಮಾಡುವ ಅಗತ್ಯವೇ ಇರುವುದಿಲ್ಲ. ಜತೆಗೆ ಉತ್ತಮ ಕಾವ್ಯದ ಲಕ್ಷಣವನ್ನು ಹೇಳಿದರೆ ಸಾಕು ಅಥವಾ ಲಕ್ಷಣ ಸಮನ್ವಿತವಾದ ಉತ್ತಮ ಕಾವ್ಯ ರಚಿತವಾದರೆ ಸಾಕು ಶ್ರದ್ಧಾವಂತರಾದ ಒದುಗರು ಯಾವುದು ಉತ್ತಮ ಕಾವ್ಯ ಎಂಬುದನ್ನು ತಾವೇ ತಿಳಿದು ಕೊಳ್ಳುತ್ತಾರೆ. ಆದ್ದರಿಂದ ಅವರನ್ನು ಕುರಿತು ಪ್ರತ್ಯೇಕವಾಗಿ ಹೇಳುವುದೇನಿದೆ?

ಇತ್ಯಾದಿ ಗ್ರಹಿಕೆಗಳು ಅಂದಿನ ಪರಿಸರದಲ್ಲಿ ಇದ್ದುವೆಂದು ತೋರುತ್ತದೆ. ಸಹೃದಯನಿಗೆ ಅತ್ಯಂತ ಮುಖ್ಯವಾದ ಸ್ಥಾನವನ್ನು ಕೊಟ್ಟು ಮತ್ತು ಕಾವ್ಯದ ಸಾರವಾದ ರಸದ ಚರ್ಚೆಯನ್ನು ಸಹೃದಯಾನುಭವವನ್ನೇ ಕೇಂದ್ರವಾಗಿರಿಸಿಕೊಂಡು ನಡೆಯಿಸಿದ ಭಾರತೀಯ ಕಾವ್ಯ

ಮೀಮಾಂಸೆ-ತನ್ನ ಕಾವ್ಯ ಚರ್ಚೆಯನ್ನು ಕವಿಗಳಿಗಾಗಿ ಉದ್ದೇಶಿಸಿದೆ ಹೊರತು ಸಹೃದಯರಿಗಲ್ಲ. ಒಂದು ವೇಳೆ ಕಾವ್ಯ ಮೀಮಾಂಸೆ ಸಹೃದಯರಿಗಾಗಿಯೂ ಉದ್ದೇಶಿತವಾದ ಸಾಹಿತ್ಯ ವಿಮರ್ಶೆಯ ಅಂಶಗಳನ್ನು ಒಳಗೊಂಡಿದ್ದರೆ ಅದು ಬಹುಶಃ ಸಾಹಿತ್ಯದ ಸ್ವರೂಪವನ್ನೇ ಬದಲಾಯಿಸಬಹುದಾಗಿತ್ತು. ಎಂದು ಊಹಿಸುವುದು ತಪ್ಪೇನಿಲ್ಲ.

**ವಿ. ಸೀತಾರಾಮಯ್ಯ ೧೯೭೩ ಕವಿರಾಜ ಮಾರ್ಗಂ:**

ಕಾವ್ಯ ಮೀಮಾಂಸೆಗೆ ಸಂಬಂಧಿಸಿದಂತೆ ಶ್ರೀವಿಜಯನ ಚಿಂತನೆಗಳನ್ನು ಕಾಣಬಹುದು. ಕಾವ್ಯ ಎನ್ನುವುದು ಕವಿಭಾವ ನಿರ್ಮಿತ; ಅನೇಕ ಪ್ರಕಾರಗಳಲ್ಲಿ ಅಭಿವ್ಯಕ್ತಿ ಪಡೆಯುವ ಉಕ್ತಿ ಮಾತ್ರ, ವಿಶಿಷ್ಟವಾದ ಶಬ್ದರಚನೆ, ವಿವಿಧಾರ್ಥಗಳ ಅಭಿವ್ಯಕ್ತಿರೂಪದ ಅಲಂಕಾರ ಎನ್ನುತ್ತಾನೆ. "ನುತಶಬ್ದಾಲಂಕಾರದೊಳ್ ಅತಿಶಯಮಿೂ ಕನ್ನಡಕ್ಕೆ ಸತತಂಪ್ರಾಸಂ"[೨] ಎನ್ನುತ್ತ ಸಂಸ್ಕೃತದಲ್ಲಿಲ್ಲದ ಆದಿಪ್ರಾಸ ಕನ್ನಡದಲ್ಲಿ ಪ್ರಮುಖ್ಯ ಪಡೆದಿರುವಂಥದ್ದನ್ನು ಗುರುತಿಸಿ ಪ್ರಾಶಸ್ತ್ಯ ನೀಡಿದ್ದಾನೆ.

ಸಂಸ್ಕೃತ ಲಕ್ಷಣಗಳನ್ನು ಅನುವಾದಿಸುತ್ತಲೇ, ಕನ್ನಡ ಕಾವ್ಯ ರಚನಾ ಪದ್ಧತಿಗೆ ಹೊಂದಿಕೊಳ್ಳುವಂಥ ಉದಾಹರಣ ಪದ್ಯಗಳನ್ನು ರಚಿಸುವುದನ್ನು ಕಾಣಬಹುದು. ಹಾಗೂ ಉದಾಹರಣ ಪದ್ಯಗಳ ಹಿನ್ನಲೆಯಲ್ಲಯೇ ದೋಷ, ಆದೇಷಗಳನ್ನು, ನಿರ್ಣಯಿಸಿ ಹೇಳುವುದು ಕವಿರಾಜ ಮಾರ್ಗದ ವೈಶಿಷ್ಟ್ಯವಾಗಿದೆ, ಛಂದೋವಿಚಾರ ಪದಪ್ರಯೋಗ ಪದ್ದತಿ. ವ್ಯಾಕರಣ ವಿಚಾರಗಳಲ್ಲಿನ ಕನ್ನಡಕ್ಕೆ ಸಂಬಂದಿಸಿದ ಅಂಶಗಳನ್ನು ಲಕ್ಷಣಗಳನ್ನು ಗುರುತಿಸಿ ತಿಳಿಸಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

**ಎಂ.ವಿ.ಸೀತಾರಾಮಯ್ಯ: ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ-೧೯೭೪**

ಈ ಕೃತಿಯಲ್ಲಿ ಕಾವ್ಯ, ಸ್ವರೂಪ, ಕಾವ್ಯ ಪ್ರಭೇದಗಳು ಎಂಬ ಲೇಖನಗಳಿದ್ದು. ಕಾವ್ಯ ಸ್ವರೂಪವೆಂಬ ಲೇಖನದಲ್ಲಿ ಶ್ರೀವಿಜಯ, ಪಂಪನ ಕೃತಿಯಲ್ಲಿನ ಉಕ್ತಿಗಳ ಹಿನ್ನಲೆಯಲ್ಲಿ ಕಾವ್ಯ ಎಂದರೇನು ? ಕಾವ್ಯ ಧರ್ಮ ಎಂದರೇನು? ಎಂಬುದರ ಬಗ್ಗೆ ವಿಶ್ಲೇಷಿಸುತ್ತದೆ. ಕಾವ್ಯ ಪ್ರಭೇದ ಎಂಬ ಲೇಖನದಲ್ಲಿ ಮಾರ್ಗ, ದೇಸಿ, ವಸ್ತುಕ, ವರ್ಣಕ, ಕುರಿತ ಚಿಂತನೆಯನ್ನು ವಿಶ್ಲೇಷಿಸುತ್ತಾರೆ.

ಶ್ರೀವಿಶದವರ್ಣೆ ಮಧುರಾ
ರಾವೋಚಿತೆ ಚತುರ ರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತುಮನ್ಮಾನಸದೊಳ್.[೩]

ಎಂಬ ಕವಿರಾಜಮಾರ್ಗದ ಸಾಲುಗಳು ಸರಸ್ವತಿ ವರ್ಣನೆಯನ್ನು ತಿಳಿಸುತ್ತಿದ್ದರೂ ಕನ್ನಡ ಕಾವ್ಯ ಸ್ವರೂಪವನ್ನು ಕುರಿತಂತೆ ಅಭಿಪ್ರಾಯ ವ್ಯಕ್ತ ಪಡಿಸುತ್ತದೆ. "ಮದುರ, ಔಚಿತ್ಯ, ಚತುರ, ಸುಂದರ ಪದರಚನೆ ಹೊಂದಿರುವಂಥದ್ದು ಕಾವ್ಯ ಎಂದು ಅಭಿಪ್ರಾಯ ಪಡುತ್ತದೆ.

ಕಾವ್ಯ ಪ್ರಭೇದ ಎಂಬ ಲೇಖನದಲ್ಲಿ ವಸ್ತುಕ ವರ್ಣಕ-ಮಾರ್ಗ, ದೇಸಿ-ಲಕ್ಷಣಗಳು ತಿಳಿಸುತ್ತಲೇ ಕಾವ್ಯ ಮೀಮಾಂಸಾ ಪ್ರಶ್ನೆಗಳಿಗೆ ಉತ್ತರಿಸುವುದನ್ನು ಕಾಣಬಹುದು. ಗದ್ಯ, ಪದ್ಯ, ಮಿಶ್ರಿತವಾದ ಚಂಪೂವನ್ನು ವಸ್ತುಕವೆಂದು, ರಗಳೆ ಷಟ್ಪದಿ ಸಾಂಗತ್ಯ ಎಂದು ದೇಸಿ ಛಂದಸ್ಸುಗಳುಳ್ಳ ಕಾವ್ಯ ವರ್ಣಕಗಳೆಂಬ ಕಲ್ಪನೆಗಳು ಕಾವ್ಯ ಮೀಮಾಂಸೆಗೆ ಕನ್ನಡ ಕೊಡುಗೆ ಎನ್ನಬಹುದು.

**ಕೆ.ಜಿ. ನಾಗರಾಜಪ್ಪ. ಮರುಚಿಂತನೆ-೧೯೮೮**

ಈ ಕೃತಿಯ ಲೇಖನಗಳಲ್ಲಿ ವಚನಕಾರರಲ್ಲಿನ ಬಗೆಗಳನ್ನು, ವಚನಕಾರರ ಮೇಲೆ ಹಿಂದಿನ ಕಾವ್ಯ ಪರಂಪರೆ ಬೀರಿದ ಪ್ರಭಾವಗಳನ್ನು ಕನ್ನಡದಲ್ಲಿ ಕಾವ್ಯ ಮೀಮಾಂಸೆ ಶಾಸ್ತ್ರರೂಪದಲ್ಲಿ ಮೂಡದಿದ್ದಕ್ಕೆ ಕಾರಣಗಳನ್ನು ಚರ್ಚಿಸುತ್ತಾರೆ.

ಕನ್ನಡ ಕಾವ್ಯ ಪರಂಪರೆಯಲ್ಲಿ ಅನ್ಯಮತ ಖಂಡನೆ, ಸ್ವಮತ ಸಮರ್ಥನೆ, ಧಾರ್ಮಿಕ ತತ್ವಗಳಿಗೆ ಆದ್ಯತೆ ನೀಡುತ್ತ ಹೋಗಿದ್ದನ್ನು ಕಾಣಬಹುದು. ವೀರಶೈವ ಕವಿಗಳು ಸಹ ವಿವಿಧ ವರ್ಗಗಳ ಸಾಮಾನ್ಯ ಜನತೆಯ ಆಚಾರ, ವಿಚಾರ, ಖಂಡಿಸುವುದಕ್ಕೆ ಮಾತ್ರ ಸೀಮಿತರಾದರು. ಪ್ರತಿಭೆಗಿಂತ ವ್ಯೂತ್ಪತ್ತಿಗೆ ಆದ್ಯತೆ ನೀಡಿದ್ದರಿಂದ ಅನುಕರಣ ಗ್ರಂಥಗಳು ಅಧಿಕವಾದವು. ಕಾವ್ಯದಲ್ಲಿ ಧರ್ಮ, ಧರ್ಮದಲ್ಲಿ ಕಾವ್ಯ ಎಂಬಂಥ ಅಂಶಗಳು ಬುದ್ಧಿ ಜೀವಿಗಳ ನಾಲಿಗೆಯ ಕಸರತ್ತಿನ ರಕ್ಷಣೆಯಲ್ಲಿ ಮಾತ್ರ ಬೆಳೆಯಿತು.[೪] ಎಲ್ಲಿಯೂ ಹೇಚ್ಚಾಗಿ ಕಾವ್ಯ ಮೀಮಾಂಸೆಯ ವಿಚಾರಗಳು ಚಿಂತನೆಗೆ ಒಳಗಾಗಲಿಲ್ಲ ಎನ್ನುತ್ತಾರೆ. ವಚನ ರಚನೆ (ಪ್ರಕಾರ) ಇದ್ದಕ್ಕಿದ್ದ ಹಾಗೆ ಮಾಡಿದ್ದಲ್ಲ, ಅದರ ಒಳ, ಹೊರ ಸ್ವರೂಪದ ಮೇಲೆ ಬೌದ್ಧ, ಜೈನ, ವೈದಿಕ, ತಾಂತ್ರಿಕ, ಗುಪ್ತ ಸಮಾಜದ ಪ್ರಭಾವವಿದೆ. 'ವಚನವೇ ಬೇರೆ, ವಚನ ರಚನೆಯೇ ಬೇರೆ,' ವಚನಕಾರರು ಹಾಗೂ ವಚನ ರಚನಾಕಾರರು ಬೇರೆ, ಬೇರೆ ಎನ್ನುತ್ತಾರೆ.

**ಎನ್.ಎಸ್. ನಾರಾಯಣಭಟ್ಟ(ಸಂ) ಕನ್ನಡ ಸಾಹಿತ್ಯ ಪ್ರತಿಭೆಯ ಸ್ವರೂಪ ಇಂದು ತೌಲನಿಕ ಚಿಂತನೆ-೧೯೮೯**

ಈ ಕೃತಿಯಲ್ಲಿ ಕಿ.ರಂ. ನಾಗರಾಜರ ಕನ್ನಡ ಕಾವ್ಯ ಪರಂಪರೆ. ಸಂಸ್ಕೃತ ಕಾವ್ಯ ಮೀಮಾಂಸೆ ಸಂಬಂದ-ಸಂಘರ್ಷದ ನೆಲೆಗಳು ಎಂಬ ಲೇಖನದಲ್ಲಿ ಸಾಹಿತ್ಯ ಮೀಮಾಂಸೆ ಎಂದರೇನು? ಅದರ ಗುರಿಯಾವುದು? ಕೃತಿಯೊಂದಿಗೆ ಓದುಗನ ಸಂಬಂದಗಳು ಹೇಗಿರುತ್ತವೆ? ಅನುಭವವನ್ನು ಮೀಮಾಂಸೆಯ ಚೌಕಟ್ಟಿಗೆ ಒಳಪಡಿಸಲು ಸಾದ್ಯವಿದೆಯೆ?

ಕಾವ್ಯ ತತ್ತ್ವ ಬೆಳವಣಿಗೆಯಾಗುವುದರ ಮೂಲಕ ಬದಲಾಗಲು ಕಾರಣಗಳೇನು? ಎಂಬುದರ ಬಗ್ಗೆ ಚರ್ಚಿಸುತ್ತಾರೆ. ಕನ್ನಡಸಂದರ್ಭದಲ್ಲಿ ಪ್ರಕಟಗೊಂಡಿರುವ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳಾದ ಮಾರ್ಗ- ದೇಸಿಯ ಬಗೆಗೂ ಚರ್ಚಿಸುತ್ತಾರೆ.

ದೇಸಿಗೆ ಹೆಚ್ಚು ಆದ್ಯತೆ ನೀಡುತ್ತಾ, ದೇಸಿ ಎಂಬುದು ಜೀವಂತ ಸ್ವರೂಪದ್ದು. ವೈವಿದ್ಯವುಳ್ಳದ್ದು, ಸಂಸ್ಕೃತಿಯ ವಿಶಿಷ್ಟತೆ ಹಾಗೂ ಭಾಷಾ ವೈಶಿಷ್ಟ್ಯ ಒಳಗೊಂಡಿದ್ದೆಂದು ಗುರುತಿಸುತ್ತಾರೆ.

ಕಾವ್ಯ ಸಂಬಂಧಿಯಾದ ತತ್ತ್ವಗಳ ಚರ್ಚೆಯೇ ಸಾಹಿತ್ಯ ಚಿಂತನೆ, ಕೃತಿಯೊಂದರ ಅಥವಾ ಅನೇಕ ಕೃತಿಗಳ ಓದಿನಿಂದ ಪಡೆದ ಗ್ರಹಿಕೆ, ಆ ಗ್ರಹಿಕೆಯ ಕ್ರಮಾಗತವಾಗಿ ಸಂಯೋಜಿಸುವುದು ಸಾಹಿತ್ಯ ಚಿಂತನೆಯ ಗುರಿ.[೫] ಪ್ರತಿಯೊಬ್ಬ ಓದುಗನು ಕೃತಿಯೊಂದಿಗೆ ಅನೇಕ ಮಟ್ಟದ ಸಂಬಂದವನ್ನು ಸ್ಥಾಪಿಸಿರುತ್ತಾನೆ. ಒಬ್ಬ ಓದುಗನಿಗೆ ಅನೇಕ ಓದುಗಳು ಸಾದ್ಯವಿರುವಂತೆ, ಕಾಲದಿಂದ ಕಾಲಕ್ಕೆ ಕೃತಿಯೊಂದರ ಓದುವಿಕೆಯ ಸ್ವರೂಪವೂ ಬದಲಾಗುತ್ತಿರುತ್ತದೆ. ಕೃತಿಯೊಂದರಿಂದ ಓದುಗ ಪಡೆಯುವ ಸಮಸ್ತ ಅನುಭವವನ್ನು ಮೀಮಾಂಸೆಯ ಪರಿಕಲ್ಪನೆಗಳ ಚೌಕಟ್ಟಿಗೆ ಒಳಪಡಿಸುವುದು ಸಾಧ್ಯವಿದೆ ಎನ್ನುತ್ತಾರೆ.

**ರಾಘವೇಂದ್ರ ಪಾಟೀಲ, ನವಮೇಘರೂಪ-೧೯೯೪**

ಈ ಕೃತಿಯ ಮೊದಲ ಲೇಖನವು ಕಾವ್ಯ ಮೀಮಾಂಸೆಯ ಬಗೆಗಳನ್ನು ಕನ್ನಡ ಕಾವ್ಯ ಮೀಮಾಂಸೆಯ ಸ್ವರೂಪವನ್ನು ಕುರಿತ ವಿಚಾರಗಳನ್ನು ಒಳಗೊಂಡಿದೆ.

ಕಾವ್ಯ, ಕಾವ್ಯಮೀಮಾಂಸೆ, ಕಾವ್ಯಚಿಂತನೆ, ವಿಮರ್ಶೆ, ಪ್ರತ್ಯೇಕ ಹಾಗೂ ಪೂರಕವಾದಂತ ಸಂಕಥನಗಳೆಂದು ಗುರುತಿಸುತ್ತದೆ. ಕಾವ್ಯ ಮೀಮಾಂಸೆಯಲ್ಲಿ ಚರ್ಚಿತವಾಗುವ ಕವಿ, ಕೃತಿ, ಓದುಗ, ಸಮಾಜದ ಸಂಬಂದಗಳನ್ನು ಹಾಗೂ ಸ್ವರೂಪವನ್ನು ಅಭಿವ್ಯಕ್ತಿ ಹಾಗೂ ಓದಿನ ಪ್ರಕ್ರಿಯೆಯ ಹಿನ್ನಲೆಯಲ್ಲಿ ಸಸೂರ್, ಲ್ಯಾಂಗರ್, ಬಾರ್ತ ಚಿಂತನೆಗಳ ಹಿನ್ನಲೆಯಲ್ಲಿ ಡೆಕಾರ್ಟೆ, ನ್ಯೂಟನ್, ಐನ್‌ಸ್ಟೆನ್ ವಿಚಾರಗಳ ಹಿನ್ನಲೆಯಲ್ಲಿ,[೬] ಕಾವ್ಯ ಮೀಮಾಂಸೆಯನ್ನು ಗುರುತಿಸುತ್ತ ಕನ್ನಡ ಕಾವ್ಯ ಮೀಮಾಂಸೆಯ ಸ್ವರೂಪವನ್ನು ಅಲ್ಲಮನ ವಚನಗಳ ಮೂಲಕ ಅಭಿವ್ಯಕ್ತಿಯ ಸ್ವರೂಪವನ್ನು ಕಟ್ಟಿಕೊಡಲು ಯತ್ನಿಸುತ್ತಾರೆ, ಹಾಗೂ ಭಾಷೆ ಶಾಸ್ತ್ರಜ್ಞ ಬೌತ ವಿಜ್ಞಾನಗಳ ವಿಚಾರಗಳನ್ನು ಅವುಗಳಲ್ಲಿ ಕಾಣಬಹುದು. (ಪಂಪ, ಬೇಂದ್ರೆ, ಅಡಿಗ, ಅಲ್ಲಮ ವಿಚಾರಗಳ ಹಿನ್ನೆಲೆಯಲ್ಲಿ)

**"ಶಿವರುದ್ರಪ್ಪ, ಜಿ.ಎಸ್. ಕನ್ನಡ ಕವಿಗಳ ಕಾವ್ಯ ಕಲ್ಪನೆ"-೧೯೮೯**

ವಚನಕಾರರ ಕವಿ ಕುರಿತ ಧೋರಣೆ ಹಾಗೂ ವಸ್ತುವಿನ ಬಗ್ಗೆ ಅವರ ನಿಲುವುಗಳನ್ನು ಈ ಕೃತಿಯಲ್ಲಿ ಗಮನಿಸಬಹುದು.

ವಚನಗಳು ಕನ್ನಡ ಸಾಹಿತ್ಯದ ವಸ್ತು, ಭಾಷೆ, ದೋರಣೆಗಳಲ್ಲಿ ಬದಲಾವಣೆಯನ್ನುಂಟು ಮಾಡಿ ದೇಸಿ ಸಂಪ್ರದಾಯಕ್ಕೆ ದಾರಿ ಮಾಡಿಕೊಟ್ಟವು. ವಚನಗಳು ಸಾಹಿತ್ಯದ ತುರ್ತಿನಿಂದ ಮಾಡಿದ್ದಲ್ಲ, ಸಾಹಿತ್ಯ ಅಥವಾ ಕಾವ್ಯದ ಬಗ್ಗೆ ಹೆಚ್ಚಿನ ಒಲವು ಇರಲಿಲ್ಲ. ನಿಜವಾದ ಅನುಭವ ಸಾಧನೆಗೆ ವಿದ್ಯೆಯ ಅವಶ್ಯಕತೆಯಿಲ್ಲ ಎಂಬುದೇ ಅವರ ನಿಲುವಾಗಿತ್ತು. ವಚನಕಾರರಿಗೆ ಅನುಭಾವ ಮತ್ತು ಅದನ್ನು ಹಿಡಿದಿಡಬಲ್ಲ, ಪ್ರಕಾರದ ಅವಶ್ಯವಿತ್ತು. ಹಾಗೂ ಅವರಿಗೆ ಸಾಹಿತ್ಯವಾಗುವ, ಕಾವ್ಯವಾಗುವ ಅಪಾಯದಿಂದ ಪಾರಾಗುವುದೇ ಅವರ ನಿಲುವಾಗಿತ್ತು. "ಆನು ಒಲಿದಂತೆ ಹಾಡುವೆ" 'ಎನ್ನ ಕಾಯವ ದಂಡಿಗೆಯ ಮಾಡಯ್ಯ' ಎಂಬ ವಚನಗಳು ವಸ್ತುನಿಷ್ಠ ಕಾವ್ಯ ಪರಂಪರೆಗೆ ತೋರಿದ ಪ್ರತಿಕ್ರಿಯೆ ಹಾಗೂ ಮುಂದಿನ ಕಾವ್ಯ ಪರಂಪರೆಗೆ ಕಾವ್ಯ ತತ್ತ್ವದ ಸೂಚನೆಯನ್ನು ನೀಡುತ್ತದೆ.[೭] ಬರಹಗಾರನ ಸ್ವಾತಂತ್ರ್ಯದ ಬಗ್ಗೆ ತಿಳಿಸುತ್ತದೆ. ಪ್ರಾದೇಶಿಕ ವಸ್ತು ಪರಂಪರೆ ಆರಂಬವಾದದ್ದೇ ವಚನಕಾರರಿಂದ.

ವಚನಗಳು ಪ್ರಾದೇಶಿಕತೆಯಲ್ಲಿ ಸಂಬವಿಸಿದ ಅಪೂರ್ವ ವ್ಯಕ್ತಿನಿಷ್ಠೆ ಅಭಿವ್ಯಕ್ತಿಗಳು ಇವರು ಹಿಂದಿನ ವೇದ, ಪುರಾಣ, ಶಾಸ್ತ್ರ, ಆಗಮಗಳನ್ನು, ಮಹಾಕಾವ್ಯಗಳನ್ನು ಓದುವುದೇ ವಿದ್ಯೆ ಎಂಬ ವಿಚಾರಗಳನ್ನು ವಿರೋಧಿಸುವುದು ಇವರಲ್ಲಿ ಕಾಣಬಹುದು. ವೈದಿಕರ ಕಾವ್ಯ ನಾಯಕ ಕಲ್ಪನೆಯು ಇದರಲ್ಲಿ ತಲೆಕೆಳಗಾಯಿತು. ಸಮಾಜದ ಯಾವುದೇ ಸ್ತರದ ಸಾಮಾನ್ಯ ವ್ಯಕ್ತಿ ಅಥವಾ (ಸಾಮಾನ್ಯ) ಭಕ್ತ ನಾಯಕನಾಗತೊಡಗಿದ.

ಕವಿಯ ವ್ಯಕ್ತಿತ್ವಕ್ಕೆ ಅಗತ್ಯವಾದ ಸ್ವಾತಂತ್ರ್ಯವನ್ನು ತಂದು ಕೊಡುವ ನಿಲುವನ್ನು ಪರಿಣಾಮಕಾರಿಯಾಗಿ ರೂಪಿಸಿದ್ದು ವಚನ ಚಳುವಳಿ ಮೊದಲಬಾರಿಗೆ ನೇರವಾಗಿ ರಾಜತ್ವ ಅಧಿಕಾರ, ಆಶ್ರಯಗಳನ್ನು ವಿರೋಧಿಸುತ್ತಾರೆ ಎಂದು ಶಿವರುದ್ರಪ್ಪ ಅವರು ಗುರುತಿಸುತ್ತಾರೆ.

**ಡಾ. ವೀರಣ್ಣ ದಂಡೆ, "ಕನ್ನಡ ಕಾವ್ಯ ಮೀಮಾಂಸೆ"–೨೦೦೬**

ಈ ಕೃತಿಯಲ್ಲಿ ೧. ಕನ್ನಡಶಿಷ್ಟ ಕಾವ್ಯ ಮೀಮಾಂಸೆ,
೨. ಅನುಭಾವ ಕಾವ್ಯ ಮೀಮಾಂಸೆ,
೩. ಜನಪದ ಕಾವ್ಯ ಮೀಮಾಂಸೆ,

ಇವುಗಳನ್ನು ಕುರಿತಾದ ಚರ್ಚೆಯನ್ನು ಒಳಗೊಂಡಿದೆ.

ಈಗ ಎರಡು ಸಾವಿರ ವರ್ಷಗಳಿಂದ ಸಂಸ್ಕೃತ ಕಾವ್ಯ ಮೀಮಾಂಸೆಯನ್ನು ಕನ್ನಡ ಸಾಹಿತ್ಯಲೋಕ ಅನುಸರಿಸಿಕೊಂಡು ಬಂದಿದೆ. ಆದರೆ ಅದರ ಬದಲಾದ ಈ ಸಂದರ್ಭದಲ್ಲಿ ಕನ್ನಡದ್ದೇ ಆದ ಒಂದು ಕಾವ್ಯ ಮೀಮಾಂಸೆಯ ಚರ್ಚೆಯ ಅಗತ್ಯವನ್ನು ಕನ್ನಡ ವಿದ್ವಾಂಸರು ಚರ್ಚಿಸಿದ್ದಾರೆ. ಇಂತಹ ಸಂದರ್ಭದಲ್ಲಿ ಎರಡು ಸಾವಿರ ವರ್ಷಗಳಿಂದಲೂ ಕನ್ನಡವನ್ನು ಹಿಡಿದು ಆಳಿದ ಸಂಸ್ಕೃತ ಕಾವ್ಯಮೀಮಾಂಸೆಯ ಚಿಂತನೆಗಳು ನಮಗೀಗ ಏಕೆ ಪ್ರಸ್ತುತವಲ್ಲ ಎಂಬುದನ್ನು ಹೇಳಬೇಕಾಗುತ್ತದೆ. ಹೀಗೆ ಹೇಳಬೇಕಾದರೆ, ನಾವು ಸಂಸ್ಕೃತ ಕಾವ್ಯಮೀಮಾಂಸೆಯ ವಿಚಾರಗಳನ್ನು ಪುನರ್‌ಪರಿಶೀಲನೆಗೆ ಒಳಪಡಿಸಬೇಕಾಗುತ್ತದೆ. ಅವುಗಳ ಕೊರತೆಗಳೇನು ಎಂಬುದರ ಚರ್ಚೆ ಆದಾಗಲೇ ನಮಗೆ ಮುಂದೆ ಹೋಗಲು ಹೆಚ್ಚು ಸಾದ್ಯವಾಗುತ್ತದೆ. ಅಂತಹ ಒಂದು ಸಣ್ಣ ಪ್ರಯತ್ನವನ್ನು "ಕನ್ನಡ ಶಿಷ್ಟಕಾವ್ಯ ಮೀಮಾಂಸೆ" ಎಂಬ ಭಾಗದಲ್ಲಿ ಮಾಡಿದ್ದಾರೆ.

ಸಂಸ್ಕೃತ ಕಾವ್ಯ ಮೀಮಾಂಸಕರು ಹಾಕಿಕೊಡುವ ದಾರಿಯಲ್ಲೇ ಸಾಗಿ ಅವರ ಚಿಂತನೆಗಳ ಕೊರತೆಗಳನ್ನು ಗುರುತಿಸಿ ಕನ್ನಡ–ಕವಿಗಳ ಚಿಂತನೆಗಳ ಸಹಾಯ ಪಡೆದು ಕಾವ್ಯ, ಕಾವ್ಯದ ಕಾರಣ ಕವಿ–ಕಲಾವಿದ ಸಹೃದಯ ಇವುಗಳ ಚರ್ಚೆ ಒಳಗೊಂಡಿದೆ.

ಈ ಶಿಷ್ಟ ಕಾವ್ಯ ಮೀಮಾಂಸೆ ಅಭ್ಯಾಸ ಮಾಡಿದಾಗ ಇದೊಂದು ಸೌಂದರ್ಯ ಕಾವ್ಯ ಮೀಮಾಂಸೆ, ಕಾವ್ಯ ಮೀಮಾಂಸೆಯ ಇನ್ನುಳಿದ ಮುಖಗಳಾದ "ರಾಚನಿಕ ಕಾವ್ಯಮೀಮಾಂಸೆ" ಮತ್ತು "ಜೀವನ ಕಾವ್ಯ ಮೀಮಾಂಸೆ" ಇವುಗಳೆಡೆಗೆ ಇದು ಲಕ್ಷಹಾಕುವುದಿಲ್ಲ.[೮]

ಕೇವಲ ಲಿಖಿತ–ಪ್ರೌಢ ಸಾಹಿತ್ಯವನ್ನು ಮಾತ್ರ ಗಮನಿಸುತ್ತದೆ. ಮೌಖಿಕ ಮತ್ತು ಅನುಭವ ಸಾಹಿತ್ಯಗಳು ಇದರ ಪರಧಿಯಿಂದ ಹೊರಗುಳಿಯುತ್ತವೆ. ಶಬ್ದ ಮತ್ತು ಅರ್ಥಗಳಿಗೆ ಮಾತ್ರ ಒತ್ತುಕೊಟ್ಟು ಇಡೀ ಮೀಮಾಂಸೆ ಬೆಳೆದಿದೆ. ವಸ್ತುವಿನ ಚರ್ಚೆಯಡೆಗೆ ವಿಶೇಷ ಗಮನ ಕೊಡುವುದಿಲ್ಲ.

ಕನ್ನಡ ಶಿಷ್ಠ ಕವಿಗಳ ವಿಚಾರಗಳನ್ನು ಗಮನಿಸಿದರೆ, ಇವರು ಸಂಸ್ಕೃತದ ರಸ, ಧ್ವನಿ, ಅಲಂಕಾರ ರೀತಿ ವಕ್ರೋಕ್ತಿ, ಔಚಿತ್ಯ ಈ ಆರು ಸಿದ್ಧಾಂತಗಳಿಗೆ ಬದ್ಧರಾಗಿದ್ದಾರೆ. ಕನ್ನಡದ ಶಾಸ್ತ್ರಕಾರರಾಗಿರಬಹುದು. ಕವಿಗಳಾಗಿರಬಹುದು ಸಂಸ್ಕೃತ ಸಾಹಿತ್ಯ ಸಿದ್ಧಾಂತಗಳನ್ನು ಚರ್ಚಿಸುವ ಗೋಜಿಗೆ ಹೋಗಿಲ್ಲ ಇವರಲ್ಲಿ ಅದನ್ನು ಒಪ್ಪಿ ಮುನ್ನಡೆಯುತ್ತಾರೆ. ಅವುಗಳನ್ವಯ ಕವಿಗಳು ತಮ್ಮ ಕಾವ್ಯಗಳನ್ನು ಸೃಷ್ಟಿಸುತ್ತಾರೆ. ಹೀಗಾಗಿ ಕನ್ನಡ ಕವಿಗಳ ಮಾತುಗಳನ್ನಿಟ್ಟುಕೊಂಡು ರಸ, ಧ್ವನಿ, ಮುಂತಾದ ಸಿದ್ಧಾಂತಗಳನ್ನು ಪ್ರತ್ಯೇಕವಾಗಿ ಅಭ್ಯಸಿಸುವಷ್ಟು ಚರ್ಚೆಗಳು ಅವರಲ್ಲಿ ಕಂಡು ಬರುವುದಿಲ್ಲ.

ಇಲ್ಲಿ ಕನ್ನಡ ಲಿಖಿತ ಮೂಲದ ಶಿಷ್ಠ ಕವಿಗಳ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳನ್ನು ಈ ಕೃತಿಯಲ್ಲಿ ಚರ್ಚಿಸುವಾಗ ಹಳಗನ್ನಡ ಮತ್ತು ನಡುಗನ್ನಡ ಕವಿಗಳ ವಿಚಾರಗಳನ್ನು ಇಟ್ಟುಕೊಳ್ಳಲಾಗಿದೆ.

ವೀರಣ್ಣದಂಡೆಯವರ ಈ ಶಿಷ್ಠಿ ಕಾವ್ಯ ಮೀಮಾಂಸೆಯ ಕುರಿತಾದ ವಿಚಾರಗಳು ಸಂಸ್ಕೃತದಿಂದ ಪಡೆದುಕೊಂಡಿದ್ದರು ಅರ್ಥವಾಗುವ ಸರಳವಾದ ಶೈಲಿಯಿಂದ ಕಾವ್ಯ, ಕವಿಯ ಸಾಮರ್ಥ್ಯಗಳು, ಕಾರಣಗಳು, ಸಹೃದಯ ಪರಿಣಾಮಗಳು, ಪ್ರಯೋಜನಗಳು ವಿಶಿಷ್ಠತೆಯಿಂದ ಹೊಸ ಚಿಂತನೆಯಿಂದ ಕಟ್ಟಿಕೊಟ್ಟಿದ್ದಾರೆ.

"ಅನುಭಾವ ಕಾವ್ಯ ಮೀಮಾಂಸೆ"

ಕನ್ನಡ ಅನುಭಾವ ಸಾಹಿತ್ಯದ ಮಾದರಿಯಾದ ವಚನ ಸಾಹಿತ್ಯವನ್ನು ಗಮನಿಸಿ, ಕಾವ್ಯ ಮೀಮಾಂಸೆಯ ಪ್ರಮುಖವಾದ ಮೂಲ ಪರಿಕಲ್ಪನೆಗಳನ್ನು ವಿವರಿಸಲು ಇಲ್ಲಿ ಪ್ರಯತ್ನಿಸಿದ್ದಾರೆ. ಸೌಂದರ್ಯ ದೃಷ್ಠಿಯನ್ನು ಪ್ರಮುಖವಾಗಿ ಹೊಂದಿರುವ ಸಂಸ್ಕೃತ (ಶಿಷ್ಠ) ಕಾವ್ಯ ಮೀಮಾಂಸೆಗಿಂತ ವಚನ ಸಾಹಿತ್ಯ (ಅನುಭವ ಸಾಹಿತ್ಯದ) ಧಾರೆಕೊಡುವ ಮೀಮಾಂಸೆಯ ಹೊಳಹುಗಳು ಭಿನ್ನವೆನಿಸುತ್ತವೆ.

ವಚನಕಾರರ ಕೆಲ ಆಲೋಚನೆಯ ಹೊಳಹುಗಳು ವಿಶೇಷವಾಗಿ ಕವಿಯ 'ನಡೆ-ನುಡಿ' ಕುರಿತ ಚಿಂತನೆಯು ಇದು ಒಳಗೊಂಡಿದೆ. ಇಲ್ಲಿ ಜ್ಞಾನದ ಲಿಖಿತ ಮೂಲಗಳ ನಿರಾಕರಣೆ ಮಾಡಿ ಬದುಕಿನ ಭಾಗವಾಗಿ ಕಾವ್ಯವನ್ನು ಗಮನಿಸಿದರು. ಅದು ಮೌಖಿಕವಾಗಿರಬೇಕು, ಹಾಡುವಂತಿರಬೇಕು, ಇವರು ಸಂಪೂರ್ಣವಾಗಿ ಭಾರತೀಯ ಕಾವ್ಯ ಮೀಮಾಂಸೆಯನ್ನು ತಿರಸ್ಕರಿಸಿ ತಮ್ಮದೇ ನಿಲುವಿನಲ್ಲಿ ಹೊಸ ಚಿಂತನೆಯನ್ನು ಕಟ್ಟಿಕೊಟ್ಟರು. ಇಲ್ಲಿಯ ವಿಚಾರಗಳು ಆಸೆಯ ನಡಿಗೆ. ಇಲ್ಲಿ ಪ್ರಮುಖವಾಗಿ ಸಾಮಾಜಿಕ ಬದಲಾವಣೆ ವಯಕ್ತಿಕ ಬದಲಾವಣೆಗೆ ತನುಮನ ಪ್ರಾಣಶುದ್ಧಿ, ತಮ್ಮನ್ನು ತಾವು ಅರಿವುದು, ಮೌಲ್ಯಯುತವಾದ ಬದುಕುವ ಅಂಶಗಳು ಕಂಡುಬರುತ್ತದೆ.

ಹೀಗೆ ಅನುಭಾವಿಕ ನೆಲೆಯಲ್ಲಿ, ವಚನ, ಪುರಾಣಗಳು, ಇವುಗಳ ಮೂಲಕ ಕವಿ ಮತ್ತು ಕಾವ್ಯ ಈ ಎರಡರ ಸಂಪೂರ್ಣ ಬದಲಾದ ಚಿತ್ರಣವನ್ನು ಕಾಣಲು ಬಯಸಿರುವುದನ್ನು ನಾವು ಅರಿಯುತ್ತೇವೆ. ಸಮಾಜದ ಯಾವುದೇ ಸ್ತರದಿಂದ ಬಂದ ಒಬ್ಬ ಸಹಜ ಸಾಮಾನ್ಯನು ಕೂಡ ಶಿಕ್ಷಿತ ಸಮಾಜದ ಪ್ರತಿಭಾವಂತನಂತಹ ಲಿಖಿತ ಮೂಲದ ವ್ಯೂತ್ಪತ್ತಿ ಸಾಮರ್ಥ್ಯ

ಮತ್ತು ಅಭ್ಯಾಸ ಬಲಗಳನ್ನು ಹೊಂದದೆ ಕಾವ್ಯ ರಚಿಸಲು ಸಾದ್ಯವೆಂಬ ಅರಿವು ಶರಣರಿಗೆ ಮೂಡಿದ್ದೆ ಮೌಖಿಕ ಪರಂಪರೆಯ ದೇಸಿ ಸಾಹಿತ್ಯದ ಸಾದ್ಯತೆಗಳ ಹಿನ್ನಲೆಯಲ್ಲಿ ಎಂದು ಅನಿಸುತ್ತದೆ.

'ಶರಣರ ಅನುಭಾವದ' ಬಗೆಗಿನ ಒಟ್ಟು ವಿಚಾರಗಳನ್ನು ಗಮನಿಸಿದರೆ ಅದು ಶರಣನ (ಕವಿಯ) ವ್ಯಕ್ತಿತ್ವದ ಮತ್ತು ತಿಳುವಳಿಕೆಯ ಸಾಮರ್ಥ್ಯವಾಗಿ, ಕಾವ್ಯದಲ್ಲಿ ಒಡಮೂಡಿನಿಲ್ಲುವ ತಿರುಳಾಗಿ (ಕಾವ್ಯಾನುಭವವಾಗಿ) ತೋರುತ್ತದೆ. ಅನುಭಾವ ಸಾಹಿತ್ಯ ಚಿಂತನೆಯಲ್ಲಿ. ಕವಿ, ಕಾವ್ಯ, ಸಹೃದಯ ಕಲಾವಿದ ವಿಚಾರಗಳು ವಿಭಿನ್ನತೆಯನ್ನು ಕಾಣುತ್ತೇವೆ. ಇಲ್ಲಿ ಅನುಭಾವದ ಅಭಿವ್ಯಕ್ತಿಯೇ ವಚನ ಮನದೇರೆದು ಮಾತನಾಡಿದ್ದು ಕಾವ್ಯ, ಒಲಿದಂತೆ ಹಾಡಿದ್ದ ಕಾವ್ಯ, "ಇವುಗಳ ಹುಟ್ಟಿಗೆ 'ಜ್ಞಾನಾನುಭಾವ' ಎಂಬ ಕವಿಯ ಸಾಮರ್ಥ್ಯಗಳು ಸೃಷ್ಟಿಗೆ ಕಾರಣವಾದವು.

ಬಯಲು ರೂಪ ಮಾಡಬಲ್ಲಾತನೆ ಶರಣನು
ಆರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ
ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?
ಆರೂಪಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ?
ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ ಕುಡಲ ಸಂಗಮದೇವಾ?[6]

ಬಸವಣ್ಣನವರ ಈ ವಚನದ ಸಾಲುಗಳು ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳಿಗೆ ಹೊಂದಿಸಿಕೊಂಡು ವಿವರಿಸುತ್ತಾ ಡಾ. ಜಿ.ಎಸ್. ಶಿವರುದ್ರಪ್ಪ. ಅವರು ಶರಣನೇ ಕವಿ. ಲಿಂಗಾನುಭಾವಿಯೇ ಸಹೃದಯ ಎಂದು ಅರ್ಥೈಯಿಸುತ್ತಾರೆ. ಒಂದೊಂದು ಕ್ಷೇತ್ರದ ವಿಚಾರಗಳನ್ನು ಹೊಸದಾಗಿ ಅಭ್ಯಸಿಸುವಾಗ ಇಂತಹ ಹೊಂದಾಣಿಕೆಗಳನ್ನು ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ವಚನ ಸಾಹಿತ್ಯವನ್ನು ಕಾವ್ಯ ಚಿಂತನೆಯ ಹಿನ್ನಲೆಯಲ್ಲಿ ವ್ಯಾಪಕವಾಗಿ ಅವಲೋಕಿಸಿದಾಗ ವಚನಗಳಲ್ಲಿ ವ್ಯಕ್ತಿವಾದ ಶರಣ ಎಂಬ ಪರಿಕಲ್ಪನೆಗೆ ಸಂಬಂಧಿಸಿದ ವಿಚಾರಗಳು ಅವನ ಅಭಿವ್ಯಕ್ತಿಗೆ ಸಂಬಂಧಿಸಿ ಮಾತನಾಡುವಾಗ–"ಕವಿ" ಪರಿಕಲ್ಪನೆ ಸರಿಯಾಗಿ ಹೊಂದಿಕೆಯಾಗುತ್ತದೆ.

ಅರಿವು ಅನುಭಾವ ಚಿಂತನೆಯನ್ನು ಇಲ್ಲಿ ಕಾಣುತ್ತೇವೆ. ಅರಿದಡೆ ಶರಣ, ಮರೆದಡೆ ಮಾನವ, ಎನ್ನುತ್ತಾರೆ ಬಸವಣ್ಣನವರು.

"ಜನಪದ ಕಾವ್ಯ ಮೀಮಾಂಸೆ"

ಸಂಸ್ಕೃತ ಕಾವ್ಯಮೀಮಾಂಸಕರು. ಶಾಸ್ತ್ರೀಯವಾಗಿ ಶಿಷ್ಟ ಕಾವ್ಯದ ಸ್ವರೂಪವನ್ನು ನಿರುಪಿಸಿರುವಂತೆ, ಜನಪದ ಸಾಹಿತ್ಯ ಸ್ವರೂಪವನ್ನು ಶಾಸ್ತ್ರೀಯವಾಗಿ ನಿರೂಪಿಸುವಲ್ಲಿ ಯಾವ ಮೀಮಾಂಸಕರೂ ಪ್ರಯತ್ನಿಸಿಲ್ಲ. ಜನಪದ ಕವಿಗಳು ತಮ್ಮ ಕಾವ್ಯದ ಸ್ವರೂಪದ ಬಗ್ಗೆ

ವಿವೇಚನೆ ನಡೆಸಿಲ್ಲ ಇದನ್ನು ನಾವು ಜನಪದ ಕವಿಗಳಿಂದ ನಿರೀಕ್ಷಿಸುವಂತಿಲ್ಲ. ಏಕೆಂದರೆ ಅವರಿಗೆ ಕಾವ್ಯದ ಅನುಭಾವದ ಪರಿಚಯವಿದ್ದರೂ ಅದನ್ನು ಶಾಸ್ತ್ರೀಯವಾಗಿ ಹೇಳುವ ರೀತಿ ಮತ್ತೆ ಕಾಣಿಸುವುದು ಶಿಕ್ಷಣವೆತ್ತ ಪಂಡಿತರದು.

ಜನಪದ ಕವಿಗಳು ಶುದ್ಧ ಪ್ರಯೋಗಶೀಲರು. ಅವರು ತಮ್ಮ ಪ್ರಯೋಗಗಳಲ್ಲಿ ಹೊಸತನ್ನು ವೈವಿಧ್ಯವನ್ನು ತರಬಲ್ಲರು. ಜನಪದರಲ್ಲಿ ಕಾವ್ಯದ ಉಪಯೋಗಿಯಾದುದ್ದಾಗಿರಬೇಕು, ಮತ್ತು ಹಿತವಾದುದ್ದಾಗಿರಬೇಕು. ಎಂಬ ಮಾತಿಗೆ ಜನಪದ ಕವಿಗಳ ಕಾವ್ಯಕಲ್ಪನೆಗೆ ಸಾಕ್ಷಿ ಅವರಿಗೆ ಮುಖ್ಯವೆನಿಸುವುದು ಕಾವ್ಯದ ತಿರುಳು-ಅನುಭವ. ಈ ಅನುಭವ ಸಹೃದಯರಿಗೆ ಹಿತವಾದಂತಹದಾಗಿರಬೇಕು. ಎಂಬುದು ಜನಪದ ಕವಿಗಳ ಅಭಿಪ್ರಾಯ.

ಇಲ್ಲಿಯ ಚಿಂತನೆ ಶಿಷ್ಟ ಶಾಸ್ತ್ರಕಾರರ ಮತ್ತು ಅದನ್ನು ಅನುಸರಿಸುವ ಶಿಷ್ಟ ಕವಿಗಳ ಮಾತಿಗಿಂತ ಹೆಚ್ಚು ವೈಜ್ಞಾನಿಕವಾದ ತಿಳುವಳಿಕೆಯಿಂದ ಕೂಡಿದೆ.

ಬಾಳ ಗೋಪಾಳನ ಹಾಡ ಕೇಳರಿ
ಹಸುಗೂಸಿಗಿ ಹಾಕಿದಾಂಗ ಕ್ಷೀರದನಾ![೧೦] (ಬಾ.ಗೊ,ಲಾ)

ಈ ಸಾಲುಗಳಲ್ಲಿ ಹಸುಗೂಸು ಹಾಲು 'ಕುಡಿಯುವ ಸಹಜಕ್ರಿಯೆ' ಯನ್ನು ಸಹೃದಯನು ಹಾಡು ಕೇಳುವ 'ಕ್ರಿಯೆ'ಯೊಂದಿಗೆ ಹೋಲಿಸಿ ವಿಷಯವನ್ನು ಹೆಚ್ಚು ಸ್ಪಷ್ಟಪಡಿಸಲು ಪ್ರಯತ್ನಿಸಲಾಗುತ್ತದೆ. ಇಲ್ಲಿ ಕೂಸು ಹಾಲು ಕುಡಿಯುವ ಒಟ್ಟು ಕ್ರಿಯೆಯ ಕಾವ್ಯದ ಒಟ್ಟು ಸ್ವರೂಪವನ್ನು ಅರ್ಥವತ್ತಾಗಿ ಧ್ವನಿಸುತ್ತದೆ.

ಇವರು ಕಾವ್ಯ ಸ್ವರೂಪದ ಬಗ್ಗೆ ಚರ್ಚಿಸುವಾಗ ಪ್ರಮುಖವಾಗಿ ೧. ಜನಪದ ಕಾವ್ಯ ಸಮೂಹ ಸಂದರ್ಭದ ಕೂಸು ೨.ಸಾಸ್ಕೃತಿಕ ವಸ್ತು ನೈಸರ್ಗಿಕರಣ ೩.ಹಾಡುಗಾರಿಕೆ-ಸಂಗೀತ ೪.ಪ್ರದರ್ಶನಗುಣ ಮೌಖಿಕ ಪರಂಪರೆ, ಗ್ರಾಮವಾಸಿ, ಅನಕ್ಷರಸ್ಥರ ಸೃಷ್ಟಿ, ಸಮಷ್ಟಿ ಪ್ರಜ್ಞೆಯನ್ನು ಕಾವ್ಯವು ಒಳಗೊಂಡಿರುವುದು ಕಂಡುಬರುತ್ತದೆ.

ಶಿಷ್ಟ ಕಾವ್ಯದಲ್ಲಿ 'ಕವಿಯ ವ್ಯಕ್ತಿತ್ವ'ವೆಂಬ ಸಂದರ್ಭದಮೂಲಕ ಹೊರಹೊಮ್ಮುವ ಅವನ ಅನುಭವದ ಅಭಿವ್ಯಕ್ತಿಯಲ್ಲಿ ಶಬ್ದ-ಅರ್ಥಗಳನ್ನು ಸುಂದರಗೊಳಿಸುವ, ಪರಿಣಾಮಕಾರಿ ಯಾಗಿಸುವ ಕೆಲಸದಲ್ಲಿ-ಗುಣ, ಅಲಂಕಾರ, ಔಚಿತ್ಯ, ವಕ್ರೋತಿ, ಧ್ವನಿ, ರಸಗಳು ಕೆಲಸ ಮಾಡುತ್ತವೆ. ಅಲ್ಲಿ ಶಬ್ದರ್ಥಗಳು ಪ್ರಯೋಗಗೊಳ್ಳುದು ಈ ಎಲ್ಲ ಸಂಗತಿಗಳ ಜೊತೆಗೂಡಿಯೇ ಹಾಗಯೇ ಜನಪದ ಕಾವ್ಯ ಪ್ರಯೋಗಗೊಳ್ಳುವುದು ಸಾಂಸ್ಕೃತಿಕ ಸಂದರ್ಭದ ಮೂಲಕ. ಮುಖ್ಯವಾಗಿ ಆ ಸಂದರ್ಭವೊದಗಿಸುವ ವಸ್ತು ಮತ್ತು ಸಂಗೀತ (ಸೊಬಗು)ಗಳಿಂದ ಆಯಾ ಸಂದರ್ಭಗಳಲ್ಲಿ ಹಾಡು, ಕಥೆ, ಒಗಟು, ಒಡಪು, ಗಾದೆಗಳು ಸಂದರ್ಭದ ತಿರುಳಿನಿಂದ ಸೃಷ್ಟಿಗೊಂಡು ಅಲ್ಲಿಯ ಸೊಬಗಿನಲ್ಲಿ ಸುಂದರವೆನಿಸುತ್ತವೆ. ಮತ್ತು ಪರಿಣಾಮಕಾರಿಯಾಗುತ್ತವೆ. ಜನಪದ ಸಾಹಿತ್ಯ ಚರ್ಚೆಯಲ್ಲಿ, ಅದರ ಸ್ವರೂಪ ಅರಿಯುವಲ್ಲಿ ಮುಖ್ಯವೆನಿಸುತ್ತದೆ.

ವೀರಣ್ಣ ದಂಡೆಯವರ ಈ ಜನಪದ ಕಾವ್ಯ ಮೀಮಾಂಸೆಯಲ್ಲಿ ಕಾವ್ಯ, ಕವಿ, ಸಹೃದಯನನ್ನು ಕುರಿತು ಜನಪದ ಹಾಡುಗಳ ಮೂಲಕ ಅವುಗಳ ರೂಪ, ಸ್ವರೂಪ,

ಪ್ರಯೋಜನಗಳನ್ನು ಕಟ್ಟಿಕೊಟ್ಟಿದ್ದಾರೆ. ಹಳೆ ತಲೆಮಾರಿಗೆ ಜೋತುಬೀಳದೆ ಮೌಖಿಕ ಹಾಡುಗಳಲ್ಲಿ ಹೊಸ ಚಿಂತನೆಯನ್ನು ಕಟ್ಟಿಕೊಟ್ಟಿದ್ದಾರೆ.

**ಬರಗೂರು ರಾಮಚಂದ್ರಪ್ಪ, "ಬಂಡಾಯ ಸಾಹಿತ್ಯ ಮೀಮಾಂಸೆ" ೧೯೯೧**

ಈ ಕೃತಿಯಲ್ಲಿ ಲೇಖಕರು ಬಂಡಾಯ ಸಾಹಿತ್ಯದ ಪರಂಪರೆ ಲಕ್ಷಣ ಮತ್ತು ತಾತ್ವಿಕತೆಗಳನ್ನು ಕುರಿತು ಚರ್ಚಿಸುತ್ತಾರೆ. ಇಲ್ಲಿ ಪರಂಪರೆಯನ್ನು ಕುರಿತು ಹೇಳುವಾಗ ಅವರು ಪರಂಪರೆಯಲ್ಲಿ ಕಾಣುವ ಪ್ರಗತಿಪರ ಆಶಯಗಳು ವ್ಯಕ್ತಪಡಿಸುತ್ತಾರೆ. ರಾಜನ ಆಸ್ಥಾನದಲ್ಲಿದ್ದು ಆತನನ್ನೆ ಕಥಾನಾಯಕದೊಂದಿಗೆ ಸಮೀಕರಿಸಿದ್ದರೂ ಪ್ರತಿನಾಯಕನ ಮಹತ್ವ ಪೂರ್ಣ ಚಿತ್ರಣ ಕ್ರಮದಲ್ಲಿ ಪ್ರತಿಭಟನೆಯನ್ನು ಬೇಸೆಯುವುದು, ಸಾಂಪ್ರದಾಯಿಕ ಕುಲಕಲ್ಪನೆಗೆ ಬದಲಾಗಿ ಹೊಸ ಕಲ್ಪನೆ ಪ್ರತಿಪಾದಿಸುವುದು. ಆದಿ ಪುರಾಣದ ಭೋಗಲೋಕ ವರ್ಣನೆಯ ಮೂಲಕ ಸ್ವಾತಂತ್ರಾಪೇಕ್ಷೆಯನ್ನು ವ್ಯಕ್ತಪಡಿಸುವುದು. ಪಂಪನ ಆಶಯಗಳನ್ನು ಸೂಚಿಸಿದ್ದಾರೆ. ಹಾಗೂ ಹನ್ನರಡನೆಯ ಶತಮಾನದಲ್ಲಿ ರಚನೆಯಾದ ವಚನ ಸಾಹಿತ್ಯದಲ್ಲಿ ಬಂಡಾಯ ಮನೋಭಾವದ ವಚನಕಾರರ ಮೂಲಕ ಗುರುತಿಸಿದ್ದಾರೆ. ಕಾಯಕ–ದಾಸೋಹದಂತಹ ಮೌಲ್ಯಗಳನ್ನು ಸ್ಥಾಪಿಸುವುದರ ಮೂಲಕ ಚಲನಶೀಲ ಜಂಗಮತ್ವಸ್ವೀಕಾರ, ವಚನಕಾರರ ದೇಶಿಯತೆ–ಬದುಕಿನ ಬಂಡಾಯವಾಗಿ ಚಳುವಳಿಯ ಮೂಲಕ ವಿಸ್ತಾರಗೊಳ್ಳುತ್ತದೆ.

ಹರಿಹರ ಕುಮಾರವ್ಯಾಸರಂತಹ ಕವಿಗಳಲ್ಲಿ ಜನಪದ ನಿಲುವುಗಳು ಪ್ರಧಾನವಾಗಿರುವುದನ್ನು ಗಮನಿಸಲಾಗಿದೆ. ಹರಿದಾಸರು–ತತ್ವಪದಕಾರರು ಮಾನವೀಯ ಮೌಲ್ಯಗಳ ಸ್ಥಾಪನೆಗೆ ಪ್ರಮೂಖ ಕಾರಣರಾಗಿದ್ದಾರೆ. ಸಾಮಾಜಿಕ ಅವ್ಯವಸ್ಥೆಯ ವಿರುದ್ಧ ಇವರಲ್ಲಿ ನೇರವಾದ ಬಂಡಾಯವಿರದಿದ್ದರೂ ಅನೇಕ ಜನಪರ ಕಾಳಜಿಗಳು ಅಂತಃಕರಣದ ನುಡಿಗಳು ಗಮನ ಸೆಳೆಯುತ್ತವೆ, ಕುವೆಂಪು, ಕಾರಂತ, ಬೇಂದ್ರೆಯವರಂತಹ ಪ್ರಮುಖ ಸಾಹಿತಿಗಳು ಸಾಮಾಜಿಕ ಪ್ರಜ್ಞೆ, ಪ್ರತಿಭಟನೆ ಜನಪರ ಕಾಳಜಿ ಕಾಣಬಹುದು. ಪ್ರಗತಿಶೀಲ ಲೇಖಕರಾದ ನಿರಂಜನ ಕಟ್ಟಿಮನಿ. ಚದುರಂಗ ಬಂಡಾಯ ಸ್ಫೋಟ ಗುರುತಿಸಿದ್ದಾರೆ.

ಬಂಡಾಯ ಸಾಹಿತ್ಯಕ್ಕೆ ಎಡಪಂಥಿಯ ಸಿದ್ಧಾಂತಗಳು ಗಾಡವಾದ ಪ್ರಭಾವ ಭೀರಿದವು. ಜನಪದ ಚಿಂತನೆಗಳು ನವ್ಯದಸ್ಥಗಿತತೆ ಕ್ರೂರ ವ್ಯವಸ್ಥೆಯ ವಿರುದ್ಧ ಯಜಮಾನ ಸಂಸ್ಕೃತಿಯ ಎಲ್ಲ ಸಂಚುಗಳ ವಿರುದ್ಧ ಬಂಡೆದ್ದ ಪ್ರಗತಿಪರ ಮನೋಧರ್ಮವೇ ಬಂಡಾಯ ಚಳುವಳಿಯ ಮೂಲಸತ್ವ ಮುಖ್ಯವಾಗಿ ಸಮಾನತೇಯ ವ್ಯವಸ್ಥೆಯನ್ನು ಬಯಸುವುದು ಬಂಡಾಯ ಮೀಮಾಂಸೆಯದು.

ಪರಂಪರೆಯನ್ನು ಅರ್ಥಮಾಡಿಕೊಳ್ಳಲು ಪ್ರಗತಿಪರ ವಿಧಾನಗಳ ಹುಡುಕಾಟ. ಬಂಡಾಯ ಸಾಹಿತ್ಯ ಹಾಗೂ ಚಳುವಳಿಯ ಒಂದು ಗುಣವಾಗಿದೆ.

ಇಲ್ಲಿ ನಮಗೆ ಪರಂಪರೆಯ ಪ್ರಜ್ಞೆಬೇಕು; ಆದರೆ ಪರಂಪರೆಯ ಪೂಜೆ ಬೇಡ. ಪರಂಪರೆಯಿರುವುದು ಅರ್ಥಮಾಡಿಕೊಳ್ಳುವುದಕ್ಕಾಗಿಯೇ ಹೊರತು ಆರಾಧನೆಗಲ್ಲ.[೧೧] ಎಂದು ಚರಿತ್ರೆ ಮತ್ತು ಪುರಾಣ ಎಂಬ ವಿಷಯದಲ್ಲಿ ವ್ಯಕ್ತಪಡಿಸುತ್ತಾರೆ.

ಈ ಕೃತಿಯಲ್ಲಿ ಬರಗೂರು ರಾಮಚಂದ್ರಪ್ಪ ಅವರು ತಾತ್ವಿಕ ನಿಲುವನ್ನು ಈ ರೀತಿ ಮಂಡಿಸುತ್ತಾರೆ "ಸಾರ್ವಕಾಲಿಕತೆಯ ಭ್ರಮೆಗಿಂತ ಸಮಕಾಲೀನ ಪ್ರಜ್ಞೆಯ ಅಗತ್ಯವಿರಬೇಕೆಂದು"

ಸತ್ಯದ ಸತ್ಯವನ್ನು ಬಂಡವಾಳಶಾಹಿಗಳ ಸ್ವಾರ್ಥಮನಸ್ಸಿನ ಸೌಂದರ್ಯವನ್ನು ಬಂಡಾಯದ ತಾತ್ವಿಕತೆ ಏಕಕಾಲಕ್ಕೆ ತಿರಸ್ಕರಿಸುತ್ತದೆ ಎಂದು ಹೇಳುತ್ತಾರೆ. ಸಾಮಾಜಿಕ ಬದ್ಧತೆಯನ್ನು ಕುರಿತು ವಿಶ್ಲೇಷಿಸಿ ಬದ್ಧತೆಗೆ ಮಹತ್ವತೆಯನ್ನು ನೀಡಿದ್ದಾರೆ.

ಇಲ್ಲಿನ ಚಿಂತನೆಯ ಪ್ರಮುಖ ಅಂಶವೆಂದರೆ "ದುಡಿಯುವ ಜನತೆಗೆ ದಕ್ಕುವ ಸಮಾನತೆಯ ಬದುಕು: ದಲಿತರ ಮೇಲಿನ ದಬ್ಬಾಳಿಕೆಯನ್ನು ಮೆಟ್ಟನಿಂತ ಮರ್ಯಾದೆಯ ಬದುಕು: ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಥತರುವ ಸುಂದರ ಬದುಕು. ಅಪೇಕ್ಷಿಸುತ್ತದೆ.

ಈ ಕೃತಿಯ ಅಧ್ಯಯನದಿಂದ-ಜಡತೆ ಮತ್ತು ಚಲನಶೀಲತೆಗಳ ಸಂಘರ್ಷವನ್ನು ಒಳಗೊಳ್ಳುವ ಬಂಡಾಯ ಸಾಹಿತ್ಯ ಹುಟ್ಟು-ಸಾವುಗಳನ್ನು ಒಟ್ಟಿಗೇ ಅನುಭವಿಸುವ ಸಂಕಟದಲ್ಲಿ ಸೃಷ್ಟಿಯಾಗುತ್ತದೆ.

ಸಾಮಾಜಿಕ ಚಲನೆಯಲ್ಲಿ ಬರುವ ಅನೇಕ ಬಗೆಯ ತೊಡಕುಗಳ ವಿಶ್ಲೇಷಣೆಗೆ ಲೇಖನ ಒಳಪಡಿಸುತ್ತಾ ಕೆಳಜಾತಿ ವರ್ಗಗಳು. "ಮೇಲ್‌ಜಾತಿ ವರ್ಗಗಳ ನೋಡದ ನೆಲೆಯಿಂದ "ಪ್ರೇರಿತ"ರಾಗುವ ಅಲ್ಲಿನ ಸಾಂಸ್ಕೃತಿಕ ಮಾದರಿಯನ್ನು ಅನುಕರಿಸುವ ಸಾದ್ಯತೆ. ಇದನ್ನು ದ್ವಿಪಾತ್ರಾಭಿನಯ ಎಂಬ ಪರಿಕಲ್ಪನೆಯಲಿ ವಿವರಿಸಲು ಲೇಖನ ಯತ್ನಿಸುತ್ತದೆ.

**ಜಿ.ಎಸ್. ಶಿವರುದ್ರಪ್ಪ, "ಕನ್ನಡ ಕಾವ್ಯ ತತ್ವ ಚಿಂತನೆ"-೨೦೦೭**

ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಕಾವ್ಯ ನಿರ್ಮಾಣ ಮತ್ತು ಕಾವ್ಯ ನರ್ವಚನಗಳ ಕ್ಷೇತ್ರಗಳಲ್ಲಿ ಸಮಾನ ಪ್ರಭುತ್ವ ಹೊಂದಿರುವ ಹೊಸಗನ್ನಡದ ಸವ್ಯಸಾಚಿ. ಕನ್ನಡಕ್ಕೆ ಕನ್ನಡದ್ದೆ ಆದ ಕಾವ್ಯಾರ್ಥ ಚಿಂತನವನ್ನು ಕಟ್ಟಿಕೊಟ್ಟು, ಅದೇ ಮಾದರಿಯಲ್ಲಿ ಹೊಸದಾಗಿ ವಿನೂತನವಾದ ವಿಚಾರಗಳಿಂದ ಕನ್ನಡ ಕಾವ್ಯತತ್ವ ಚಿಂತನೆ ಎಂಬ ಕೃತಿಯಲ್ಲಿ ಬಹುರೂಪಿ ಚಿಂತನೆಗಳನ್ನು ಕ್ರೋಢಿಕರಿಸಿದ್ದಾರೆ. ಇಲ್ಲಿ ಕನ್ನಡ ಕವಿಗಳ ಹೇಳಿಕೆಗಳಿಂದ ತೊಡಗಿ ಕಾವ್ಯಗಳಲ್ಲಿ ಅಂತರ್ಗತವಾದ ಚಿಂತನೆಗಳಿಂದ ಮುಂದುವರೆದು ಕನ್ನಡದ್ದೆ ಆದ ಮೀಮಾಂಸೆಯನ್ನು ಕಟ್ಟಿಕೊಟ್ಟಿದ್ದಾರೆ. ಕಾವ್ಯ ಮೀಮಾಂಸೆ ಎಂಬ ಲೇಖನದಲ್ಲಿ ಕರ್ತೃ, ಕೃತಿಯನ್ನು ಕುರಿತು ಅವರದ್ದೇ ಆದ ಒಂದು ಮೀಮಾಂಸೆಯನ್ನು ಪರಿಚಯಿಸಿದ್ದಾರೆ.

**ವಚನಗಳಲ್ಲಿ ಕಾವ್ಯತತ್ವ**

ಎಂಬ ಲೇಖನದಲ್ಲಿ ವಚನಕಾರರು ಕಾವ್ಯ ಪ್ರಪಂಚದ ಪ್ರಶ್ನೆಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ. ಎಂಬ ವಿಚಾರಗಳನ್ನು ಕುರಿತು ಚರ್ಚಿಸಿದ್ದಾರೆ. ವಚನಕಾರರು ಲಿಟರೇಚರ್ ಎಂಬರ್ಥದಲ್ಲಿ ಸಾಹಿತ್ಯವನ್ನು ಗುರುತಿಸಿಲ್ಲ. ಅವರಿಗೆ ಸಾಹಿತ್ಯದ ಆಕರ್ಷಣೆಯಿಂದ ಸಾಹಿತ್ಯವಾಗುವ ಅಪಾಯದಿಂದ ಪಾರಾಗಬೇಕು ಎಂಬ ನಿಲುವಿತ್ತು.

ವಚನಗಳು ಸಿದ್ದಪಡಿಸಿದ ವಾಗ್ ರಚನೆಗಳ ಸಾಂಪ್ರದಾಯವನ್ನು ಮುರಿದು, ಅವುಗಳ ನಿರಾಕರಣೆಯಲ್ಲಿಯೇ ವಚನಗಳು ರೂಢಿಗತವಾಗಿವೆ. ಪರಂಪರೆ ಕುರಿತ ಅರಿವು ಅದರ

ಹಿಡಿತದಿಂದ ಪಾರಾಗುವ ಹಾಗೂ ವರ್ತಮಾನದ ಬಗೆಗೆ ಎಚ್ಚರವಿದ್ದು ಪ್ರಭಾವಗಳಿಂದ ದೂರವಿರುವ ಸಾಮರ್ಥ್ಯವಿರಬೇಕು ಎಂಬ ಅಂಶ ಅವರಿಗೆ ತಿಳಿದಿತ್ತು ಎನ್ನುತ್ತಾರೆ.

ಕನ್ನಡ ಕವಿಗಳ ಕಾವ್ಯ ಕಲ್ಪನೆ ಎಂಬ ಲೇಖನಗಳಲ್ಲಿ ಕವಿ ಕುರಿತ ಧೋರಣೆ, ವಸ್ತುವಿನ ಬಗ್ಗೆ ಅವರ ನಿಲುವುಗಳನ್ನು ಇಲ್ಲಿ ಗಮನಿಸಲಾಗಿದೆ.

**ಹೊಸಗನ್ನಡ ಕವಿತೆಗಳಲ್ಲಿ ಕಾವ್ಯಚಿಂತನೆ**

ಹೊಸಗನ್ನಡದ ಕಾವ್ಯದ ಎಲ್ಲ ಪ್ರಮುಖ ಸಾಹಿತ್ಯ ಚಳುಚಳಿಗಳೂ ತಮ್ಮ ಹಿಂದಿನ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಪರಂಪರೆಗೆ ತಮ್ಮ ಪ್ರತಿಕ್ರಿಯೆಗಳನ್ನು ದಾಖಲು ಮಾಡುತ್ತಲೇ ತಮ್ಮ ತಮ್ಮ ಕಾವ್ಯ ಕಲ್ಪನೆಗಳನ್ನು ಕಂಡುಕೊಂಡಿವೆ.

ಈ ಕಾವ್ಯ ಕಲ್ಪನೆ ಹಿಂದೆ ಭಾರತೀಯ ಚಿಂತನೆಗಳಿರುವಂತೆಯೇ, ಕಾಲದಿಂದ ಕಾಲಕ್ಕೆ ಸಾಹಿತ್ಯವು ಪಶ್ಚಿಮದ ಪ್ರೇರಣೆ ಪ್ರಭಾವಗಳ ಮೂಲಕ ಪಡೆದುಕೊಂಡ ವಿಚಾರಗಳೂ ರಾಜಕೀಯ–ಸಾಮಾಜಿಕ ಹಾಗೂ ಮನಸ್‌ಶಾಸ್ತ್ರಿಯ ಆಲೋಚನೆಗಳು ಇವೆ ಈ ಎಲ್ಲ ವ್ಯತ್ವತ್ತಿಯಿಂದ ಈ ಹೊತ್ತಿನ ಕವಿಗಳ ಕಾವ್ಯ ಕಲ್ಪನೆ ತೀರಾ ವಿಶಿಷ್ಟವಾದ ರೀತಿಯಲ್ಲಿ ನಿರೂಪಿಸಲ್ಪಟ್ಟಿದೆ. ಅದರಲ್ಲಿಯೂ ಮುಖ್ಯವಾಗಿ ಕವಿಯ ಸೃಜನ ಪ್ರಕ್ರಿಯೆ ಕಾವ್ಯ ನಿರ್ಮಾಣ ಪೂರ್ವದ ಹಾಗೂ ಕಾವ್ಯ ನಿರ್ಮಿತಿಯ ಎರಡೂ ಸಂದರ್ಭಗಳ ಮೂಲ ಮಾನದಲ್ಲಿ ಕಾವ್ಯ ರೂಪದಲ್ಲಿಯೇ ಕಾಣಿಸುವುದು ಒಂದು ವಿಶೇಷದ ಸಂಗತಿಯಾಗಿದೆ.

ಕವಿ ತಾನು ಕವಿಯಾದದ್ದು ಹೇಗೆ, ತನ್ನ ಕಾವ್ಯ ಜೀವನವನ್ನು ರೂಪಿಸಿದ ಶಕ್ತಿಗಳು ಯಾವುವು. ತಾನು ಅನುಭವಗಳನ್ನು ಗ್ರಹಿಸುವ ಪರಿಭಾವಿಸುವ ಹಾಗೂ ತಕ್ಕ ಶಬ್ದಾರ್ಥಗಳಲ್ಲಿ ಅಭಿವ್ಯಕ್ತಿಸುವ ವಿಧಾನ ಹಾಗೂ ಸಮಸ್ಯೆಗಳೇನು ಎನ್ನುವುದನ್ನೂ, ಹೊಸಗನ್ನಡದ ವ್ಯಕ್ತಿನಿಷ್ಠ ಕಾವ್ಯ ಪರಂಪರೆಯ ಉದ್ದಕ್ಕೂ ಗುರುತಿಸಬಹುದಾದರೂ, ನವೋದಯ ಸಂದರ್ಭದಲ್ಲಿ ತಮ್ಮ ಕವಿತೆಯ ಪೂರ್ವರಂಗವನ್ನು ಪ್ರಸ್ತಾಪಿಸುವ ಆತ್ಮಕಥನ ರೂಪದಂಥ ಕೆಲವು ಕವಿತೆಗಳಿರುವುದು ಗಮನಾರ್ಹವಾದ ಸಂಗತಿಯಾಗಿದೆ.[೨]

ಹೊಸಗನ್ನಡ ಕಾವ್ಯ ಚಿಂತನೆ ಮುಖ್ಯವಾಗಿ ಕವಿಯ ಹಾಗೂ ಕಾವ್ಯದ ಅಂತರಂಗಕ್ಕೆ ಸಂಬಂಧಿಸಿದ್ದು ಕವಿ ಲೋಕದ ಅನುಭವಗಳಿಗೆ ಸ್ಪಂದಿಸುವ 'ಗ್ರಹಿಸುವ' ಅರಗಿಸಿಕೊಳ್ಳುವ ಹಾಗೂ ಅದನ್ನು ತಕ್ಕ ಭಾಷಾ ಶರೀರದಲ್ಲಿ ಕಟ್ಟುವ ಸಮಗ್ರ ಸೃಜನಶೀಲ ವ್ಯಾಪಾರವನ್ನು ಕವಿತೆಯ ವಸ್ತುವನ್ನಾಗಿ ಮಾಡಿಕೊಂಡಿದ್ದು ಇಲ್ಲಿ ವಿಶೇಷವಾಗಿದೆ. ಮೂಲತಃ ಕವಿ ಕೇಂದ್ರಿತವಾದ ಈ ಕಾವ್ಯ ರಹಸ್ಯ ಚಿಂತನೆ ಮನಸ್‌ಶಾಸ್ತ್ರದ ಹಾಗೂ ಪಾಶ್ಚಾತ್ಯ ಕಾವ್ಯ ಚಿಂತನೆಗಳನ್ನು ಒಳಗೊಂಡು ಕನ್ನಡದ ಹಲವು ಬಿಡಿ ಬಿಡಿ ಕವಿತೆಗಳಲ್ಲಿ ಅಭಿವ್ಯಕ್ತವಾಗಿರುವುದು ತೀರಾ ವಿಶಿಷ್ಟವಾದುದಾಗಿದೆ.

**ರಹಮತ್ ತರೀಕೆರೆ, "ಮಾತು ತಲೆಯೆತ್ತುವ ಬಗೆ"–೨೦೦೫**

ಈ ಕೃತಿಯಲ್ಲಿ "ಇಂಗ್ಲಿಷ್ ಗೀತಗಳು" ಸಂಕಲನದಿಂದ ಇತ್ತೀಚಿನ ಕುಂ.ವಿ. ಯವರ ಕತೆಗಳ ತನಕ, ಒಂದು ಶತಮಾನ ಕಾಲದ ಸೃಜನಶೀಲ ಕೃತಿಗಳನ್ನು ಇಟ್ಟುಕೊಂಡು ಅವುಗಳ ಒಳಗೆ ಅಂತಸ್ಥವಾಗಿರುವ ಸಾಹಿತ್ಯ ಚಿಂತನೆಯನ್ನು ಶೋಧಿಸುವ ಕೆಲಸ ಮಾಡಿದ್ದಾರೆ.

ಕನ್ನಡ ಸಾಹಿತ್ಯ ಮೀಮಾಂಸೆ ಇಂಗ್ಲಿಷ್ ಪ್ರಧಾನ ನೆಲೆಯಲ್ಲಿನ "ಪಾಶ್ಚಾತ್ಯ ಸಾಹಿತ್ಯ ಮೀಮಾಂಸೆ" ಇವುಗಳಿಗೆ ಪ್ರತಿಯಾಗಿ ಮತ್ತು ಪರ್ಯಾಯವಾಗಿ ನಿರ್ಮಾಣ ಮಾಡಿದ ಒಂದು ವೈಚಾರಿಕ ಆಕೃತಿ. ಬೇರೆ ಬೇರೆ ಕಾಲ ಘಟ್ಟಗಳ, ಸಾಮಾಜಿಕ, ಹಿನ್ನಲೆಗಳ ಭಿನ್ನ ವೈಚಾರಿಕ ನೆಲೆಗಳ ಕನ್ನಡದ ಮಹತ್ವದ ಲೇಖಕರು ಬಿನ್ನ ಸಾಂಸ್ಕೃತಿಕ ಸಂದರ್ಭಗಳಲ್ಲಿ ಮಂಡಿಸಿದ ವಿಚಾರಗಳನ್ನು ಇಲ್ಲಿ ಒಂದೆಡೆ ಸೇರಿಸಿ ಕನ್ನಡ ಸಾಹಿತ್ಯ ಮೀಮಾಂಸೆಯ ವೈಚಾರಿಕ ವಿನ್ಯಾಸವನ್ನು ತಿಳಿಸಿದ್ದಾರೆ.[೧೩]

ಇಲ್ಲಿ ಕಾಲ, ಪ್ರದೇಶ, ಸಂದರ್ಭಗಳ ಚೌಕಟ್ಟುಗಳನ್ನು ಮೀರಿ ಅಪೂರ್ವ ಸಂಮ್ಮಿಲನದ ರೂಪದಲ್ಲಿ ಕನ್ನಡ ಸಾಹಿತ್ಯ ಮೀಮಾಂಸೆಯೆಂಬ ಕಲ್ಪನೆ ಆಕಾರವನ್ನು ತಾಳಿದೆ. ಹಾಗೂ ಹೊಸತನದ ಹಾದಿಯಲ್ಲಿ ಈ ಕೃತಿಯಿಂದ ಹೊಸದೊಂದು ಮೀಮಾಂಸೆಯನ್ನು ಹುಟ್ಟು ಹಾಕಿದ್ದಾರೆ.

**ರಹಮತ್ ತರೀಕೆರೆ, "ಇಲ್ಲಿ ಯಾರು ಮುಖ್ಯರಲ್ಲ"-೨೦೦೫**

ಈ ಕೃತಿಯಲ್ಲಿ ಕನ್ನಡದ ಸೃಜನಶೀಲ ಲೇಖಕರ ಸಾಹಿತ್ಯ ಕೃತಿಗಳ ಒಳಗಗಿನಿಂದ ಕನ್ನಡ ಸಾಹಿತ್ಯ ಮೀಮಾಂಸೆಯ ವಿನ್ಯಾಸಗಳನ್ನು ರೂಪಿಸುವ ತುಂಬಾ ವಿಶಿಷ್ಟವಾದ ಪ್ರಯತ್ನ ನಡೆಸಿದ್ದಾರೆ. ಇಲ್ಲಿನ ಒಟ್ಟು ಮೀಮಾಂಸೆಯ ಹರಹಿನಲ್ಲಿ ಕರ್ತೃ, ಸೃಷ್ಟಿ, ವಸ್ತು, ಪ್ರಕಾರ, ಪ್ರೇರಣೆ, ಪ್ರಭಾವ, ವಿಧಾನ, ಭಾಷೆ, ದೃಷ್ಟಿ, ಕೃತಿ, ಓದುಗ ಮತ್ತು ಪರಿಣಾಮ ಎನ್ನುವ ಪರಿಮಾಣಗಳನ್ನು ಇಟ್ಟುಕೊಂಡು ಮೀಮಾಂಸೆಗಳನ್ನು ಕಟ್ಟುವ ಕೆಲಸ ಮಾಡಿದ್ದಾರೆ. ಹೊರ ನೋಟಕ್ಕೆ ಈ ವಿಭಜನೆಗಳ ಹಿಂದೆ ಪಾಶ್ಚಾತ್ಯ ತತ್ವದ ಕೆಲವು ಹೊಳಹುಗಳನ್ನು ಕಾಣಿಸುತ್ತವೆ. ಕರ್ತೃಕೇಂದ್ರಿತ, ಪ್ರಕಾರಕೇಂದ್ರಿತ, ಕೃತಿಕೇಂದ್ರಿತ, ಓದುಗಕೇಂದ್ರಿತ, ವಿಮರ್ಶೆ ಎನ್ನುವ ಮಾದರಿಗಳು ಪಾಶ್ಚಾತ್ಯ ಸಾಹಿತ್ಯ ತತ್ವಗಳಲ್ಲಿ ಹೆಚ್ಚು ಚರ್ಚೆಗೆ ಒಳಗಾದವು. ಆದರೆ ಇಲ್ಲಿ ಸೃಷ್ಟಿಕರ್ತೃ, ಪ್ರೇರಣೆಪ್ರಭಾವ, ದೃಷ್ಟಿಕೋನ ಮತ್ತು ಪರಿಣಾಮ ಮುಂತಾದ ಪರಿಣಾಮಗಳನ್ನು ಇಟ್ಟುಕೊಂಡು ಕನ್ನಡದ ಸೃಜನಶೀಲ ಕೃತಿಗಳ ಮೂಲಕ ಅವುಗಳನ್ನು ವಿವರಿಸುವ ಪ್ರಯತ್ನ ನಡೆಸಿದ್ದಾರೆ. ಅರಣ್ಯ ವಿಹಾರದ ಬಹುರೂಪಿ ರೂಪಕಗಳ ರೀತಿಯಲ್ಲಿ ಕುವೆಂಪು ಅವರ "ಮಲೆಗಳಲ್ಲಿ ಮದುಮಗಳು" ಕಾದಂಬರಿಯ ತಾತ್ವಿಕತೆಯಾದ "ಇಲ್ಲಿ ಯಾರೂ ಮುಖ್ಯರಲ್ಲ" ಎನ್ನುವುದನ್ನು ಕನ್ನಡ ಸಾಹಿತ್ಯ ಮೀಮಾಂಸೆಯ ಒಂದು ಪರಿಕಲ್ಪನೆಯನ್ನು ಇಟ್ಟುಕೊಂಡು, ಕಾವ್ಯ ಕೇಂದ್ರಿತ. ಲೇಖಕ ಕೇಂದ್ರಿತ, ಮೀಮಾಂಸೆ ಮಾದರಿಗಳನ್ನು ಮೀರುವ ಪ್ರಯತ್ನ ಇಲ್ಲಿ ನಡೆಸಲಾಗಿದೆ. ಸಾಹಿತ್ಯ ತರಗತಿಗಳ ಶಾಸ್ತ್ರ ಮುಖದ ಗಾಂಭೀರ್ಯವನ್ನು ಬಹುತೇಕ ಕಡೆ ಕಳಚಿಕೊಂಡು ಕಥನದ ಮತ್ತು ಸಂಕಥನದ ಮಾದರಿಯಲ್ಲಿ ಮೀಮಾಂಸೆಯನ್ನು ರೂಪಿಸಲಾಗಿದೆ. ಹಾಗಾಗಿ ಇಲ್ಲಿ ಕಾವ್ಯ, ಕತೆ, ಕಾದಂಬರಿ, ಅನುಮಾನ, ಪ್ರಬಂಧ ಇವೆಲ್ಲ ಒಂದು ಇನ್ನೊಂದರೊಡನೆ ಸೇರಿಕೊಂಡು ಹೊಸಚಿಂತನೆಯ ಕಿಡಿಗಳು ಕಾಣಿಸಿಕೊಂಡಿವೆ.[೧೪]

ಸಾಹಿತ್ಯ ಮೀಮಾಂಸೆಯನ್ನು ಸಾಮಾಜಿಕ ಮೌಲ್ಯಗಳ ಚರ್ಚೆಯೊಂದಿಗೆ ಜೊತೆ ಜೊತೆಗೆ ಕೊಂಡು ಹೋಗಿರುವುದು ಸಾಮಾನ್ಯವಾಗಿ ನಮ್ಮ ಕಾವ್ಯ ಮೀಮಾಂಸೆಗಳಲ್ಲಿ ಮೀಮಾಂಸೆ

ಎನ್ನುವುದು ಆ ಕೃತಿಗೆ ಸಂಬಂಧಪಟ್ಟ ಅಂಶ ಎನ್ನುವ ತಪ್ಪು ಕಲ್ಪನೆ ಇದೆ. ಇದನ್ನು ಬದಲಿಸಿ ಬದುಕಿನೊಂದಿಗೆ ಸಾಹಿತ್ಯವು ಅನುಸಂಧಾನ ಮಾಡುವುದೇ ಸಾಹಿತ್ಯ ಮೀಮಾಂಸೆ ಎನ್ನುವುದನ್ನು ಇಲ್ಲಿ ಕನ್ನಡದ ಕೃತಿಗಳ ಮೂಲಕ ತೋರಿಸಿಕೊಡುವ ವಿಶೇಷ ಪ್ರಯತ್ನ ನಡೆದಿದೆ.

- ಈ ಅಧ್ಯಾಯದಲ್ಲಿ ತೀ.ನಂ. ಶ್ರೀಕಂಠಯ್ಯನವರ "ಭಾರತೀಯ ಕಾವ್ಯಮೀಮಾಂಸೆ"ಯಲ್ಲಿ ಕವಿ ಕೃತಿ ಸಹೃದಯ ಕುರಿತಾದ ಚಿಂತನೆಯನ್ನು ಒಳಗೊಂಡಿದೆ. ಆ ಮೂಲಕ ಸಾಹಿತ್ಯ ಚಿಂತನೆಯನ್ನು ಕಟ್ಟಿಕೊಟ್ಟಿದೆ.
- ಎಂ.ವಿ. ಸೀತಾರಾಮಯ್ಯನವರ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ ಎಂಬ ಕೃತಿಯಲ್ಲಿ ಕಾವ್ಯ, ಸ್ವರೂಪ, ಕಾವ್ಯಧರ್ಮ ಎಂಬುದರ ವಿಶ್ಲೇಷಣೆ ಒಳಗೊಂಡಿದ್ದು, ವರ್ಣಕ, ಮಾರ್ಗ ದೇಸಿಯ ಚಿಂತೆಯನ್ನು ಕಾಣಬಹುದು.
- ಜಿ.ಎಸ್. ಶಿವರುದ್ರಪ್ಪನವರ "ಕನ್ನಡ ಕವಿಗಳ ಕಾವ್ಯ ಕಲ್ಪನೆ"ಯಲ್ಲಿ ಕವಿ ಕುರಿತು ಧೋರಣೆ ಹಾಗೂ ವಸ್ತುವಿನ ನಿಲುವಿನ ಬಗ್ಗೆ ಗುರುತಿಸಿದ್ದಾರೆ.
- "ಕನ್ನಡ ಕಾವ್ಯ ಮೀಮಾಂಸೆ" ಡಾ. ವೀರಣ್ಣ ದಂಡೆ ಎಂಬ ಕೃತಿಯಲ್ಲಿ ಕನ್ನಡ ಶಿಷ್ಟ ಕಾವ್ಯ ಮೀಮಾಂಸೆ, ಅನುಭವ ಕಾವ್ಯ ಮೀಮಾಂಸೆ, ಜನಪದ ಕಾವ್ಯ ಮೀಮಾಂಸೆ. ಇವುಗಳ ಮೂಲಕ ಹೊಸ ಬಗೆಯ ಸಾಹಿತ್ಯ ಚಿಂತನೆಯನ್ನು ಕಾಣಬಹುದು.
- "ಬಂಡಾಯ ಸಾಹಿತ್ಯ ಮೀಮಾಂಸೆ" ಬರಗೂರ ರಾಮಚಂದ್ರಪ್ಪ–೧೯೯೧–ಈ ಕೃತಿಯಲ್ಲಿ, ತಾತ್ವಿಕ ಚೌಕಟ್ಟನ್ನು ಹಾಕಿ ಕೊಟ್ಟಿದ್ದಾರೆ. ಮತ, ಕೆಳಜಾತಿ, ಜನರ ಅಭಿವ್ಯಕ್ತಿಯ ಪ್ರಧಾನವಾಗಿದೆ. ಜನಪರ ಕಾಳಜಿಗಳ ಅಂತಃಕರಣದ ನುಡಿಗಳು ಗಮನ ಸೆಳೆಯುತ್ತವೆ.
- ಜಿ.ಎಸ್. ಶಿವರುದ್ರಪ್ಪ "ಕನ್ನಡ ಕಾವ್ಯ ತತ್ವ ಚಿಂತನೆ"–೨೦೦೭ ಇಲ್ಲಿ ಕನ್ನಡಕ್ಕೆ ಕನ್ನಡದ್ದೆ ಆದ ಮಾದರಿಯಲ್ಲಿ ಹೊಸದಾಗಿ ವಿನೂತನವಾದ ವಿಚಾರಗಳಿಂದ ಬಹುರೂಪಿ ಚಿಂತನೆಗಳನ್ನು ಕ್ರೂಢೀಕರಿಸಿದ್ದಾರೆ.

* ರಹಮತ್ ತರೀಕೆರೆ 'ಇಲ್ಲಿ ಯಾರು ಮುಖ್ಯರಲ್ಲ' ಕೃತಿಯಲ್ಲಿ ಬದುಕಿನೊಂದಿಗೆ ಸಾಹಿತ್ಯವು ಅನುಸಂಧಾನ ಮಾಡುವುದು ಸಾಹಿತ್ಯ ಮೀಮಾಂಸೆ ಎನ್ನುವುದನ್ನು ತೋರಿಸಿಕೊಡುವ ಪ್ರಯತ್ನ ಕನ್ನಡ ಕೃತಿಗಳ ಮೂಲಕವೇ ಚರ್ಚೆ ಮಾಡಿರುವುದು ಕಂಡುಬರುತ್ತದೆ.

ಈ ಪುಸ್ತಕಗಳ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಚಿಂತನೆಯ ಪರಿಕಲ್ಪನೆಯನ್ನು ಕಟ್ಟಿಕೊಡುವಂಥಹ ಅಂಶಗಳ ಕಡೆ ಬೆಳಕು ಚೆಲ್ಲುತ್ತದೆ.

# ಅಡಿ ಟಿಪ್ಪಣಿಗಳು

೧. ತೀ.ನಂ.ಶ್ರೀ, ಭಾರತೀಯ ಕಾವ್ಯ ಮೀಮಾಂಸೆ, ಪುಟ–೯

೨. ವಿ. ಸೀತಾರಾಮಯ್ಯ, ಕವಿರಾಜಮಾರ್ಗಂ, ಪುಟ–೪೩

೩. ಎಂ.ವಿ. ಸೀತಾರಾಮಯ್ಯ, ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ, ಪುಟ–೧೯

೪. ಕೆ. ನಾಗರಾಜಪ್ಪ, ಮರು ಚಿಂತನೆ, ಪುಟ–೩೩

೫. ಎನ್.ಎಸ್. ನಾರಾಯಣಪ್ಪ,(ಸಂ) ಕನ್ನಡ ಸಾಹಿತ್ಯ ಪ್ರತಿಭೆಯ ಸ್ವರೂಪ: ಒಂದು ತೌಲನಿಕ ಚಿಂತನೆ ಪುಟ–೯೯

೬. ರಾಘವೇಂದ್ರ ಪಾಟೀಲ, ನವಮೇಘರೂಪ ಪುಟ–೧೦೩

೭. ಜಿ.ಎಸ್. ಶಿವರುದ್ರಪ್ಪ, ಕನ್ನಡ ಕವಿಗಳ ಕಾವ್ಯ ಕಲ್ಪನೆ ಪುಟ–೭೪

೮. ವೀರಣ್ಣ ದಂಡೆ, ಕನ್ನಡ ಕಾವ್ಯ ಮೀಮಾಂಸೆ, ಪುಟ–೩೫

೯. ವೀರಣ್ಣ ದಂಡೆ, ಅನುಭವ ಕಾವ್ಯ ಮೀಮಾಂಸೆ, ಪುಟ–೭೬

೧೦ ವೀರಣ್ಣ ದಂಡೆ, ಜನಪದ ಕಾವ್ಯ ಮೀಮಾಂಸೆ, ಪುಟ–೮೯

೧೧. ಬರಗೂರು ರಾಮಚಂದ್ರಪ್ಪ, ಬಂಡಾಯ ಸಾಹಿತ್ಯ ಮೀಮಾಂಸೆ, ಪುಟ–೭೦

೧೨. ಜಿ.ಎಸ್. ಶಿವರುದ್ರಪ್ಪ, ಕನ್ನಡ ಕಾವ್ಯ ತತ್ವ ಚಿಂತನೆ, ಪುಟ–೧೮

೧೩. ರಹಮತ್ ತರೀಕೆರೆ, ಮಾತು ತಲೆಯೆತ್ತುವ ಬಗೆ, ಪುಟ–೧೩

೧೪. ರಹಮತ್ ತರೀಕೆರೆ ಇಲ್ಲಿ ಯಾರು ಮುಖ್ಯರಲ್ಲ, ಪುಟ–೨೩

# ಅಧ್ಯಾಯ ೪

## 'ಕನ್ನಡ ಸಾಹಿತ್ಯ ಚಿಂತನೆ ಪರಿಕಲ್ಪನೆ'

ಸಾಹಿತ್ಯ ಚಿಂತನೆಯನ್ನು ಕಟ್ಟಿಕೊಳ್ಳುವ ಮುನ್ನ ಎರಡು ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಿಕೊಳ್ಳಬೇಕು ಒಂದು ಸಾಹಿತ್ಯದ್ದು ಮತ್ತೊಂದು ಚಿಂತನೆಯದು, ಚಿಂತನೆಗೆ ವಿಮರ್ಶೆ, ಮೀಮಾಂಸೆ, ವಿವೇಚನೆ ಎಂಬ ಅರ್ಥ ಒಳಪಡುತ್ತವೆ. ಹಾಗಾದರೆ ಸಾಹಿತ್ಯ ಎಂದರೆ ಅವರ ಪರಿಕಲ್ಪನೆಯನ್ನು ಅದರ ಅರ್ಥ ವಿವರಣೆಯನ್ನು ಖಚಿತವಾಗಿ ನಿಖರವಾಗಿ ಹಾಗೂ ನಿದಿಷ್ಟವಾಗಿ ವ್ಯಾಖ್ಯಾನಿಸಿ ವಿವರಿಸುವುದು ತುಂಬ ಕ್ಲಿಷ್ಟಕರವಾದದು. ಇಂಗ್ಲಿಷಿನ "Literature" ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಸಾಹಿತ್ಯ ಎಂಬ ಪದವನ್ನು ಬಳಸಲಾಗುತ್ತದೆ. ಈ ಪದದ ಬಳಕೆಯು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಹೆಚ್ಚು ಹೆಚ್ಚು ಬಳಕೆಯ ಶಬ್ದವಾಗಿ ಬೆಳಕಿಗೆ ಬಂದಿತು. ಪ್ರಾಚೀನ ಅಲಂಕಾರಿಕರು ಈ 'ಸಾಹಿತ್ಯ' ಪದದ ಪರಿಕಲ್ಪನೆಗೆ ಬದಲಾಗಿ "ಕಾವ್ಯ" ಎಂಬ ಪದವನ್ನು ಬಳಸುತ್ತಿದ್ದರು. ರಚನಾ ವಿಧಾನ, ಗದ್ಯವಾಗಲಿ, ಪದ್ಯವಾಗಲಿ ಹಾಗೂ ಶಾಸ್ತ್ರವಾಗಲಿ ಇವೆಲ್ಲಕ್ಕೂ ಅವರ ಸಮಗ್ರತೆಯನ್ನು ಸೂಚಿಸುವ ಪದವಾಗಿತ್ತು. ನಿದರ್ಶನಕ್ಕೆ ಗದ್ಯ-ಪದ್ಯ ಮಿಶ್ರಿತವಾದ ಕಾವ್ಯವನ್ನು ಚಂಪೂ ಕಾವ್ಯವೆಂದು ಪಂಪನ ಕಾವ್ಯ ಪರಂಪರೆಯಲ್ಲಿ ಕರೆಯುತ್ತಿದ್ದುದನ್ನು ಗಮನಿಸಬಹುದು. ಬರವಣಿಗೆ ಇಲ್ಲದ ಕಾಲದಿಂದಲೂ ನೆನಪಿನಲ್ಲಿ ಉಳಿದುಕೊಳ್ಳುವ ಮತ್ತು ಕಠಿಣವಾದ ವಾಙ್ಮಯವನ್ನು ಸರಳಗೊಳಿಸಿಕೊಳ್ಳುವ ಹಾಗೂ ಗದ್ಯಭಾಗವನ್ನು ಪದ್ಯ ರೂಪದಲ್ಲಿ ಕಂಠಪಾಠ ಮಾಡಿ ನೆನಪಿನಲ್ಲಿ ಇಟ್ಟುಕೊಳ್ಳುವುದರಿಂದ ಪದ್ಯವನ್ನು ಅವಲಂಬಿಸಿಕೊಂಡಿದ್ದರು. ಹಾಗಾಗಿ ಕಾವ್ಯ ಎಂಬ ಪದದ ಬಳಕೆಯನ್ನು ಸಾಹಿತ್ಯದ ಸಮಗ್ರತೆಯನ್ನು ಸೂಚಿಸುವ ಬರಹಗಾರನ ಆಂತರಿಕ ಲೋಕದ ಅಭಿವ್ಯಕ್ತಿಯ ಭಾವನಾತ್ಮಕ ತತ್ವ ವಿಚಾರ ಹಾಗೆಯೇ ಅದು ಆತನ ಭಾವನೆಯ ರೂಪದಲ್ಲಿರುವ ಶಬ್ದಾರ್ಥಗಳ ಸಹಿತತ್ವವಾಗಿರುತ್ತದೆ.

ಸಾಹಿತ್ಯ ಅನ್ನುವಂತಹದ್ದು, ಕಾಲ್ಪನಿಕವಾದದ್ದು ಅಂದರೆ ಈ ಲೋಕದಿಂದ ಹೊರತಾದುದಲ್ಲ. ಈ ಲೋಕ ಜಗತ್ತಿನ ಸಂಗತಿಗಳು, ಘಟನೆಗಳು ಕಾರ್ಯ ಕಾರಣಗಳು, ಲೇಖಕನಿಗೆ ಮೂಲ ವಸ್ತುಗಳಾಗಿದ್ದರೂ ಅವುಗಳನ್ನು ತನ್ನೊಳಗಿನ ಭಾವ ಜಗತ್ತಿನಲ್ಲಿ ಕರಗಿಸಿಕೊಂಡು ತನ್ನ ಸೃಜನಶೀಲ ಕ್ರಿಯೆ ಪ್ರಕ್ರಿಯೆಗಳಿಂದ ವಿಭಿನ್ನ ಸ್ವರೂಪದಲ್ಲಿ ಭಾಷೆ ಮಾಧ್ಯಮದ ಮೂಲಕ ಅಭಿವ್ಯಕ್ತಿಸಿ ಪುನರ್ ಸೃಷ್ಟಿಸುತ್ತಾನೆ. ಈ ಪ್ರಕ್ರಿಯೆಯ ಸೃಜನಾತ್ಮಕ ಕ್ರಿಯೆಯ ಹಿನ್ನೆಲೆಯಲ್ಲಿ ಸಾಹಿತ್ಯ ಎನ್ನುವರು.

ಪು.ತಿ.ನ. ಅವರು ಸಾಹಿತ್ಯವನ್ನು ಕುರಿತು ತಾನು ಪಡೆಯುವ ಪ್ರಾಪಂಚಿಕ ಅನುಭವಗಳನ್ನು ಆತ್ಮಾನಂದರೂಪವಾಗಿ ತಾನು ವ್ಯಂಜಿಸಬೇಕೆಂದಿರುವ ಭಾವನೆಗಳಿಗೆ ತಕ್ಕಂತೆ ಅರ್ಥ ಸಹಿತವಾದ ಶಬ್ದಗಳಿಂದ ಪುನಃ ಬಹಿರಂಗ ಪಡಿಸುವ ಕಲಾ ಸೃಷ್ಟಿಯನ್ನು ನಾವು ಸಾಹಿತ್ಯವೆನ್ನಬಹುದೆಂದು ವಸ್ತುನಿಷ್ಠವಾಗಿ ವಿವೇಚಿಸಿದ್ದಾರೆ. ಸಾಹಿತ್ಯ ಯಥಾವತ್ತಾದ ಅನುಕರಣೆಯಲ್ಲ ಬದಲಾಗಿ ಅದು ಪುನರ್ ಸೃಷ್ಟಿಯ ಕ್ರಿಯೆ ಬ್ರಹ್ಮಲೋಕ ಜಗತ್ತನ್ನು ಸೃಷ್ಟಿಸಿದ್ದಾರೆಂದು ಸಂಪ್ರದಾಯ ನಿಷ್ಠೆಗಳು ಹೇಳಿದರೆ ಅದೇ ಸೃಷ್ಠಿಯನ್ನು ಲೇಖಕ ಅಥವಾ ಕವಿ ತನ್ನ ಭಾವಾಲೋಕದಲ್ಲಿ ಪುನರ್ ಸೃಷ್ಟಿ ಮಾಡುತ್ತಾನೆ. ಆದ್ದರಿಂದಲೇ ಈತನು ಸಾಹಿತ್ಯ ಜಗತ್ತಿನಲ್ಲಿ ಎರಡನೆಯ ಬ್ರಹ್ಮನೆಂದು ಕರೆಯಿಸಿಕೊಳ್ಳತ್ತಾನೆ. ಸಾಹಿತಿಯ ಈ ಪ್ರಕ್ರಿಯೆಯನ್ನೆ ಡಾ. ಜಿ.ಎಸ್. ಶಿವರುದ್ರಪ್ಪನವರು 'ಸಾಹಿತ್ಯ ಜೀವನದ ಗತಿಬಿಂಬ' ಎಂದು ಕರೆದಿದ್ದಾರೆ.

ಸಾಹಿತಿ ಮತ್ತು ಸಾಹಿತ್ಯದ ಕ್ರಿಯೆ ವಿಶಿಷ್ಟ ಅನುಭವದಿಂದ ಕೂಡಿದ ಅಭಿವ್ಯಕ್ತಿ ಸ್ವರೂಪದ್ದಾಗಿರುತ್ತದೆ. ಅವನ್ನು ಸಾಹಿತಿ ತನ್ನ ವಿಶಿಷ್ಟ ಅನುಭವ ವಿಶೇಷವಾದ ಭಾವ ಮಾಧ್ಯಮದ ಮೂಲಕ ಹೊರಗೆಡವುವುತ್ತಾನೆ. ಅದು, ಕಥೆ, ಕಾವ್ಯ, ಕಾದಂಬರಿ, ವಿಮರ್ಶೆ, ಲೇಖಗಳು. ಯಾವುದಾದರು ಆಗಿರಬಹುದು. ಅದು ಸಾಹಿತ್ಯದ ಪರಿಧಿಯೊಳಗೆ ವ್ಯಾಪಿಸಿರುವಂತಹದ್ದು. ಹೀಗೆ ರಚನೆಗೊಂಡ ಸಾಹಿತ್ಯವನ್ನು ಕುರಿತು ಆಲೋಚಿಸುವುದು, ಚಿಂತಿಸುವುದು, ವಿಮರ್ಶಿಸುವುದು. ಚಿಂತನೆಯಾಗುತ್ತದೆ.

ಸಾಹಿತ್ಯ ರಚನೆಯ ಸಂದರ್ಭದಲ್ಲಿ. ಅಲ್ಲಿ ಕೇವಲ ಅನುಭವಗಳು, ಕಂಡುಂಡ ಘಟನೆಗಳನ್ನು ವಿವರಿಸುವುದು, ತಿಳಿಸುವುದು ಮಾತ್ರ ಆಗಿರುತ್ತದೆ. ಸಾಹಿತ್ಯವು, ಪಾತ್ರ, ಘಟನೆಗಳು, ಸನ್ನಿವೇಶಗಳು, ಅಭಿವ್ಯಕ್ತಿ ಮಾಧ್ಯಮ ಇವುಗಳ ಒಟ್ಟು ಸಂಗ್ರದಿಂದ. ಒಂದು ಕಾವ್ಯ, ಕಥೆ ಯಾವುದಾದರು ರಚನೆಗೊಳ್ಳುವುದು. ಸಾಹಿತ್ಯದಲ್ಲಿ ವಿಶೇಷವಾದ ಕುಸುರಿ ಕೆಲಸ.

ಇನ್ನೂ ಸಾಹಿತ್ಯಚಿಂತನೆಯ ಇನ್ನೊಂದು ಪರಿಕಲ್ಪನೆಯಾದ "ಚಿಂತನೆ" ಎಂದು ಗುರುತಿಸಿಕೊಂಡಿರುವ, ಅದಕ್ಕೆ ಸಮನಾದ ಅರ್ಥವನ್ನು ಕೊಡುವ ಮೀಮಾಂಸೆ, ವಿವೇಚನೆ, ವಿಮರ್ಶೆ ಇಲ್ಲಿ ಹೆಸರೇ ಸೂಚಿಸುವ ಹಾಗೆ ಈಗಾಗಲೇ ಹುಟ್ಟಿರುವ ಸಾಹಿತ್ಯದ ಒಂದು ಭಾಗವನ್ನು (ಕಥೆ, ಕಾವ್ಯ, ಲೇಖನಗಳು ಇತ್ಯಾದಿ) ಕುರಿತು ಆಲೋಚಿಸುವುದು, ಚಿಂತಿಸುವುದು, ವಿಮರ್ಶಿಸುವುದೇ ಆಗಿದೆ. ಅಂದರೆ, ಈ ಕಾವ್ಯವನ್ನು ಕುರಿತ ಚರ್ಚೆ ಎಂದು ಅರ್ಥ. ಕಾವ್ಯವೆಂದರೆ ಏನು? ಅದು ಏಕೆ ನಿರ್ಮಿತಿಯಾಗುತ್ತದೆ? ಹೇಗೆ ನಿರ್ಮಿತಿಯಾಗುತ್ತದೆ? ಅದರ ಉದ್ದೇಶ, ವ್ಯಾಪ್ತಿ ಪ್ರಯೋಜನೆಗಳೇನು? ಎನ್ನುವ ಸಂಗತಿಗಳು ಹಾಗೂ ಪ್ರಭಾವ, ಪ್ರೇರಣೆಗಳ ಕುರಿತ ಹಿನ್ನೆಲೆಯ ಸಿದ್ಧತೆಗಳ ಚರ್ಚೆಯನ್ನು ಒಳಗೊಂಡಿರುವಂತಹದ್ದು. "ಸಾಹಿತ್ಯ ಚಿಂತನೆ" ಆಗಿದೆ.

ಕಾವ್ಯ ನಿರ್ಮಿತಿಯ ನಂತರ ಅದನ್ನು ಆಸ್ವಾದಿಸುವ ಕುರಿತು.

೧. ಸಹೃದಯರ ರುಚಿ ಸಾಮರ್ಥ್ಯಗಳನ್ನು

೨. ಕೃತಿಯನ್ನು ಕುರಿತು ಅಭಿಪ್ರಾಯ

೫. ಕೃತಿ ರಚನೆಯ ಪ್ರೇರಣೆಯ ಅಂಶಗಳ ಕುರಿತು ಚರ್ಚೆ

ಈ ಸಾಹಿತ್ಯ ಮೀಮಾಂಸೆಗೆ ಹಿನ್ನೆಲೆಯಾಗಿ ಕನ್ನಡ ಕಾವ್ಯದಲ್ಲಿ ನವೋದಯ ಕಾವ್ಯದಿಂದ ನವ್ಯ ಕಾವ್ಯದ ತನಕ ಆದ ಪರಿವರ್ತನೆಗಳೂ ಅತ್ಯಂತ ಪ್ರಭಾವಶಾಲಿಯಾಗಿ ಕನ್ನಡ ಸಾಹಿತ್ಯ ಚಿಂತನೆಯ ಮೇಲೆ ಪರಿಣಾಮ ಮಾಡಿವೆ. ಏಕೆಂದರೆ ಸಾಹಿತ್ಯ ಮೀಮಾಂಸೆಯು ಮೂಲತಃ ಅಂದಿನಿಂದ ಕಾವ್ಯದಲ್ಲಿ ಕವಿಯ ಮನೋಧರ್ಮದಲ್ಲಿ ಆದ ಬದಲಾವಣೆಗಳನ್ನು ಅವಲಂಬಿಸಿದೆ. ಜೊತೆಗೆ ನಮ್ಮ ಸಾಹಿತ್ಯದ ಮೇಲೆ ಪ್ರಭಾವವನ್ನು ಬೀರಿದ ಪಾಶ್ಚಾತ್ಯ ಕಾವ್ಯ ಪರಂಪರೆ ಮತ್ತು ಕಾವ್ಯ ಮೀಮಾಂಸೆಗಳಿಂದ ನಮ್ಮ ಕಾವ್ಯ ಹಾಗೂ ಕಾವ್ಯ ಮೀಮಾಂಸೆಯ ರೂಪರೇಖೆಗಳು ಬದಲಾಗಿವೆ. ಈ ಎರಡೂ ನಮ್ಮಲ್ಲಿ ಸಮನಾರ್ಥಕ ಶಬ್ದಗಳಾಗಿ ನಿಂತಿವೆ

ಕಾವ್ಯವನ್ನು ಕುರಿತಂತೆ ತಾಳುವ ನಿಲುವುಗಳ ಆಧಾರದ ಮೇಲೆ ಕಾವ್ಯ ಮೀಮಾಂಸೆಯನ್ನು ವಿವಿಧ ರೀತಿಗಳಲ್ಲಿ ವರ್ಗೀಕರಿಸಬಹುದು.[೧] ಸಂಪ್ರದಾಯಿಕವಾಗಿ ಕಾವ್ಯ ಮೀಮಾಂಸೆಯ ವಿವಿಧ ಪ್ರಸ್ಥಾನಗಳನ್ನು ಕಾಲಾನುಕ್ರಮದಲ್ಲಿ ಗುರುತಿಸವುದುಂಟು. ಈ ಮಾದರಿಯಲ್ಲಿ ಚಾರಿತ್ರಿಕ ಕಾಲಾನುಕ್ರಮಣಿಕೆ ನಿರ್ಣಾಯಕ ಅಂಶವಾಗಿರುತ್ತವೆ. ಇದಕ್ಕೆ ಪ್ರತಿಯಾಗಿ ಆಧುನಿಕ ರೀತಿಯಲ್ಲಿ ಯಾವುದೇ ಕಾಲದ ಕಾವ್ಯ ಮೀಮಾಂಸೆಯ ಪ್ರಮುಖ ಆಸಕ್ತಿ ಕೇಂದ್ರವನ್ನು ಗಮನದಲ್ಲಿಟ್ಟುಕೊಂಡು ಕಾವ್ಯ ಮೀಮಾಂಸೆಯನ್ನು ವರ್ಗೀಕರಿಸಬಹುದು ಮೂರನೆದಾಗಿ ಭಾಷಿಕ ಸಂವಹನೆಯ ಮಾದರಿಯನ್ನು ಆಧಾರವಾಗಿಟ್ಟುಕೊಂಡು ಕಾವ್ಯ ಮೀಮಾಂಸೆಯನ್ನು ವರ್ಗೀಕರಿಸುವ ಸಾಧ್ಯತೆಯೂ ಇದೆ.

ಅಲಂಕಾರ, ರೀತಿ, ರಸ, ಧ್ವನಿ, ಪ್ರಸ್ಥಾನಗಳ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯನ್ನು ಗ್ರಹಿಸುವುದು ಸಾಂಪ್ರದಾಯಿಕವಾಗಿದೆ. ಒಂದೇ ಸಂಸ್ಕೃತಿಯಲ್ಲಿ ಕಾಲದಿಂದ ಕಾಲಕ್ಕೆ ನಿಲುವುಗಳು ಬದಲಾದಂತೆ ಬೇರೆ ಬೇರೆ ಪ್ರಸ್ಥಾನಗಳು ಹುಟ್ಟಿಕೊಳ್ಳುತ್ತವೆ. ಕಾವ್ಯ ಸ್ವರೂಪ ಕಾವ್ಯದ ಅಂತಸತ್ವ ಕುರಿತ ವಿಚಾರಗಳು, ನಿಲುಗಳು ಬದಲಾದದ್ದೇ ಸಂಸ್ಕೃತ ಕಾವ್ಯ ಮೀಮಾಂಸೆಯಲ್ಲಿ ವಿಭಿನ್ನ ಪ್ರಸ್ಥಾನಗಳು ಈ ಮಾದರಿಯ ಹಿನ್ನೆಲೆಯಲ್ಲಿ ಕಾವ್ಯ ಮೀಮಾಂಸೆಯ ವಿಚಾರಗಳು ಕಟ್ಟಿ ಕೊಡಬಹುದು.

ಕಾವ್ಯ ಮೀಮಾಂಸೆಯ ಕಾವ್ಯ ಪ್ರಕ್ರಿಯೆಯ ಯಾವ ಅಂಶಕ್ಕೆ ಅವಧಾರಣೆ ನೀಡಿದೆ ಎಂಬುದನ್ನು ಆಧರಿಸಿ ಕಾವ್ಯ ಮೀಮಾಂಸೆಯನ್ನು ನಾಲ್ಕು ಶಾಖೆಗಳಾಗಿ ವಿಂಗಡಿಸಿರುವುದನ್ನು ಕಾಣಬಹುದು ಎಮ್.ಹೆಚ್. ಅಬ್ರಾಂಸ್ ಮತ್ತು ಅವನ ವಿಚಾರಗಳನ್ನು ಅನುಸರಿಸಿದ ಕೆ.ವಿ. ನಾರಾಯಣರ (ಬೇಂದ್ರೆ ಕಾವ್ಯ ದೃಷ್ಟಿ: ೧೯೮೮) ವಿಚಾರಗಳು ಈ ಬಗೆಯ ವಿಂಗಡನೆಯ ನಿದರ್ಶನಗಳು. ಕವಿ ಕೇಂದ್ರಿತ, ವಾಚಕ ಕೇಂದ್ರಿತ, ಕೃತಿ ಕೇಂದ್ರಿತ, ಮಾಧ್ಯಮ ಕೇಂದ್ರಿತವೆಂದು ವಿಂಗಡಿಸುವ ಈ ಕ್ರಮ ಚಾರಿತ್ರಿಕ ಕಾಲ ಕ್ರಮಕ್ಕಿಂತ ಧೋರಣೆಗಳಿಗೆ ಪ್ರಾಮುಖ್ಯ ನೀಡುತ್ತದೆ. ಕವಿಕೇಂದ್ರಿತ ಮೀಮಾಂಸೆಯ ಇಡೀ ಕಾವ್ಯ ಪ್ರಕ್ರಿಯೆಯಲ್ಲಿ ಕವಿಗೆ ಪ್ರಮುಖ ಸ್ಥಾನ ನೀಡುವುದರ ಜೊತೆಗೆ ಕಾವ್ಯವೆಂಬುದು ಕವಿಯಕರ್ಮ. ಕಾವ್ಯದ ಅರ್ಥವಂತಿಕೆಯಲ್ಲಿ ಕವಿಯ ಉದ್ದೇಶಕ್ಕೆ ಪ್ರಮುಖ ಸ್ಥಾನವಿದೆ. ಎಂದು ಈ ಬಗೆಯ ಕಾವ್ಯ ಮೀಮಾಂಸೆ ನಂಬುತ್ತದೆ.

ಪ್ರತಿಭೆ, ಸ್ಪೂರ್ತಿ, ಕಲ್ಪನೆ ಎಂಬ ಪರಿಕಲ್ಪನೆಗಳು ಈ ಬಗೆಯ ಕಾವ್ಯ ಮೀಮಾಂಸೆಯಲ್ಲಿ ಪ್ರಮುಖವಾಗಿರುತ್ತದೆ. ಹಾಗೂ ಕವಿಯ ಮೇಲಾದ ಪ್ರಭಾವ ಅವನು ಮಾಡಿಕೊಳ್ಳಬೇಕಾಗುವ ಸಿದ್ಧತೆಗಳಿಗೂ ಈ ಬಗೆಯ ಕಾವ್ಯ ಮೀಮಾಂಸೆ ಹೆಚ್ಚಿನ ಒತ್ತನ್ನು ನೀಡುತ್ತದೆ. ಕವಿಜಿಹ್ವಾ ಬಂಧನದಂಥಹ ಕೃತಿಯಲ್ಲಿ ರಾಜಶೇಖರ ಪ್ರತಿಭೆಯನ್ನು ಕುರಿತು ಮಂಡಿಸಿರುವ ವಿಚಾರಗಳನ್ನು ಕವಿ ಕೇಂದ್ರಿತ ಕಾವ್ಯ ಮೀಮಾಂಸೆಯ ವಿಚಾರಗಳಿಗೆ ನಿದರ್ಶನ ಕೊಡಬಹುದು.

**ಓದುಗ ಕೇಂದ್ರಿತ ಕಾವ್ಯ ಚಿಂತನೆಯಲ್ಲಿ:**

ಓದುಗನ ಮೇಲೆ ಕಾವ್ಯದಿಂದುಟಾಗುವ ಪರಿಣಾಮಕ್ಕೆ ಮಹತ್ವ ನೀಡಲಾಗುತ್ತದೆ. ಕೃತಿಯ ಅರ್ಥವನ್ನು ಓದುಗ ಸ್ವತಂತ್ರವಾಗಿ ಕಲ್ಪಿಸಿಕೊಳ್ಳಬಲ್ಲ ಎಂಬಂಥ ವಿಚಾರವನ್ನು ಸ್ಪಷ್ಟಪಡಿಸುತ್ತವೆ. ಓದುಗ ಸಂವೇದನೆಯ ಬಗೆಗಳನ್ನು ಪ್ರಮುಖವಾಗಿ ವಿಶ್ಲೇಷಿಸುತ್ತದೆ. ರಾಜಶೇಖರನು ಕಾರಯಿತ್ರಿ, ಭಾವಯಿತ್ರಿ ಪ್ರತಿಭೆ ಎಂದು ಎರಡು ಭಾಗಮಾಡಿ ವಿಶ್ಲೇಷಿಸುವಾಗಲೂ ಕೂಡ ಓದುಗನ ಮನಸ್ಸಿನ ಪ್ರಕ್ರಿಯೆಗಳನ್ನು ಗುರುತಿಸುತ್ತಾನೆ.

**ಕೃತಿ ಕೇಂದ್ರಿತ ಮೀಮಾಂಸೆಯು:**

ಕೃತಿಯ ಸ್ವರೂಪ ಕುರಿತು ಹೆಚ್ಚಿನ ಗಮನ ನೀಡುತ್ತದೆ. ಕೃತಿಯ ಒಂದೊಂದು ಅಂಗ ಅಥವಾ ಅಂಶಗಳ ಕುರಿತು ವಿಶ್ಲೇಷಣೆ ಮಾಡುತ್ತದೆ. ಸಂರಚನಾವಾದಿಗಳ ವಿಮರ್ಶೆ ಅಥವಾ ಚಿಂತನೆ ಈ ಬಗೆಯದು. ಅರಿಸ್ಟಾಟಲ್‌ನ ಕಾವ್ಯ ಮೀಮಾಂಸೆ ಕೃತಿಯೊಂದರ ವಿವಿಧ ಅಂಶಗಳನ್ನು ಅವುಗಳ ಪರಸ್ಪರ ಸಂಬಂಧವನ್ನು ಚರ್ಚಿಸುವುದನ್ನು ಗಮನಿಸಬಹುದು.

ಮಾಧ್ಯಮ (ಭಾಷೆ) ಕೇಂದ್ರಿತ ಮೀಮಾಂಸೆಯು ಕಾವ್ಯದ ಮಾಧ್ಯಮವಾಗಿರುವ ಭಾಷೆಗೆ ಮುಖ್ಯ ನೀಡುತ್ತದೆ. ಕಾವ್ಯವನ್ನು ಭಾಷೆಯ ಸಾಮರ್ಥ್ಯದ ಒಂದು ಸಾಧ್ಯತೆಯೆಂದು ಗುರುತಿಸುತ್ತದೆ. ಯಾವಯಾವ ಬಗೆಯ ಭಾಷೆ, ಯಾವಬಗೆಯ ಪರಿಣಾಮ ಬೀರುತ್ತದೆ ಎಂದು ಚರ್ಚಿಸುತ್ತಲೇ ಕಾವ್ಯದ ಮೌಲ್ಯಮಾಪನಕ್ಕೆ ಭಾಷೆ ಬಳಕೆಯನ್ನು ಪ್ರಮುಖ ಮಾನ ದಂಡವಾಗಿ ಮಾಡಿಕೊಳ್ಳುತ್ತವೆ. ಹಾಗೂ ಕಾವ್ಯ ಪ್ರಪಂಚದ ಮುಖ್ಯ ಆಸಕ್ತಿ ಕೇಂದ್ರಗಳಾದ ಕವಿ, ಸಹೃದಯ ಮತ್ತು ಜಗತ್ತನ್ನು ಕುರಿತು ಚಿಂತಿಸುತ್ತದೆ.[2]

ಎಲ್ಲಾ ಕಾವ್ಯವು ತನ್ನ ಭಾಷೆ ಮತ್ತು ಸಂಸ್ಕೃತಿಗಳಿಗೆ ಬದ್ಧವಾಗಿರುತ್ತದೆ. ಹಾಗೆಯೇ, ಕಾವ್ಯ ಮೀಮಾಂಸೆ ತನ್ನ ಪರಿಸರದ ಭಾಷೆಯಲ್ಲಿ ಸೃಷ್ಟಿಯಾದ ಕಾವ್ಯದ ಮೊತ್ತವನ್ನು ಅನುಲಕ್ಷಿಸಿ ಸೃಷ್ಟಿಗೊಳ್ಳುತ್ತದೆ. ಆದ್ದರಿಂದ ಒಂದೊಂದು ಸಂಸ್ಕೃತಿಯ ಕಾವ್ಯ ಮೀಮಾಂಸೆಯೂ ಆಯಾ ಸಂಸ್ಕೃತಿಗೆ ವಿಶಿಷ್ಟವಾಗಿರುತ್ತದೆ.

ಚಾಮಸ್ಕಿಯಂಥ ಭಾಷಾಶಾಸ್ತ್ರಜ್ಞರು ಭಾಷೆಯ ವಿಮರ್ಶಾತ್ಮಕ ಬಗ್ಗೆ ಸಾಕಷ್ಟು ಚಿಂತನೆ ನಡೆಸಿದ್ದಾರೆ. ಹಾಗೆಯೇ, ಮನುಷ್ಯನ ಒಟ್ಟು ಜ್ಞಾನ ರಾಶಿಯನ್ನು ಕಾವ್ಯ ಮೀಮಾಂಸೆಗೆ ಯಾವ ಸ್ಥಾನ ನೀಡಬೇಕು? ಮತ್ತು ಕಾವ್ಯ ಮೀಮಾಂಸೆಗೂ ಇತರ ಜ್ಞಾನ ಶಾಖೆಗಳಿಗೂ ಇರುವ ಸಂಬಂಧ ಯಾವ ಬಗೆಯದು ಎಂಬ ಬಗ್ಗೆ ಸಂಸ್ಕೃತ ಮತ್ತು ಪಾಶ್ಚಾತ್ಯ ಭಾಷೆಗಳಲ್ಲಿ ಬೇರೆ ಬೇರೆಯದೆ ಆದ ಧೋರಣೆಗಳು ಕಾಣುತ್ತೇವೆ.

ಲೇಖನ, ಭಾಷಣ ಚಮತ್ಕಾರಗಳನ್ನು ವಿಭಜನೆ ಮಾಡುವ ಅಲಂಕಾರಶಾಸ್ತ್ರ. ಕಾವ್ಯದ ತಿರುಳನ್ನು ದರ ನಿರ್ಮಾಣ ಕ್ರಮವನ್ನು ನಿರೂಪಿಸಿರುವ ಕಾವ್ಯ ಮೀಮಾಂಸೆ, ಎಲ್ಲ ಲಲಿತ ಕಲೆಗಳಿಗೂ ಸಮಾನವಾಗಿರುವ ಸೌಂದರ್ಯ ಸ್ವರೂಪವನ್ನು ವಿಚಾರ ಮಾಡುವ ಸೌಂದರ್ಯ ಮೀಮಾಂಸೆ (RHETORICS. POETICS. AESTHETICS) ಮೂರು ಶಾಸ್ತ್ರಗಳೆಂದು ಪಾಶ್ಚಾತ್ಯರಲ್ಲಿ ಬೇರೆ ಬೇರೆಯಾಗಿ ಬೆಳೆದು ಬಂದಿದೆ. ಹಾಗೂ ಕೊನೆಯದು ತತ್ವಶಾಸ್ತ್ರದ ಅಂಗವಾಗಿ ಬರುತ್ತದೆ. ನಮ್ಮ ದೇಶದಲ್ಲಿ ಅಲಂಕಾರ ವಿಭಜನೆ, ಕಾವ್ಯ ಮೀಮಾಂಸೆ, ಸೌಂದರ್ಯ ದರ್ಶನ ಬೇರೆಬೇರೆ ಶಾಸ್ತ್ರಗಳೆಂದು ಭಾವಿಸಿ ನಿರೂಪಿಸುವ ಪದ್ಧತಿ ಬರಲಿಲ್ಲ. ಕಾವ್ಯತತ್ವ ಸಮಾಲೋಚನೆಯ ಅಂಗವಾಗಿಯೇ ಅನುಪ್ರಾಸ, ಉಪಮೆ ಮೊದಲಾದ ಅಲಂಕಾರಗಳ ವ್ಯವಸ್ಥೆ ನಡೆಯಿತು.[3] ಕಾವ್ಯದಲ್ಲಿ ರಮಣಿಯತೆಯುಂಟುಮಾಡುವ ಅಂಶಗಳೆಲ್ಲವನ್ನು ಅಲಂಕಾರಗಳೆಂದು ಕರೆದರು. ಶಬ್ದಾರ್ಥಲಂಕಾರವನ್ನು ಮುಖ್ಯವಾಗಿ ಗಮನಿಸಿದ್ದು ಸೌಂರ್ಯವೆಂಬ ವಿಶಾಲಾರ್ಥದಲ್ಲಿಯೇ ಎಂಬ ಚಿಂತನೆಗಳಿದ್ದವು. ಆದ್ದರಿಂದಲೇ ಅಲಂಕಾರಶಾಸ್ತ್ರ ಕಾವ್ಯ ಮೀಮಾಂಸೆ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಅಲಂಕಾರ ಪ್ರಸ್ಥಾನ, ರೀತಿ ಪ್ರಸ್ಥಾನಗಳು ಪಾಶ್ಚಾತ್ಯರಲ್ಲಿ ಬಂದಂಥ ನ್ಯೂಕ್ರಿಟಿಸಿಸಂ ಈ ಹಿನ್ನೆಲೆಯಲ್ಲಿಯೇ ಮೂಡಿಬಂದವು. ಕಾವ್ಯ ಮೀಮಾಂಸೆ ಒಂದು ಶಿಸ್ತಾಗಿ ಬೆಳೆಯುವಾಗ ಎರಡು ಪ್ರಮುಖವಾದ ಧೋರಣೆಗಳನ್ನು ಒಳಗೊಂಡಿರುವುದು ಕಾಣಬಹುದು. ಒಟ್ಟು ಕಾವ್ಯವನ್ನು ಅನುಕರಣೆ ಎಂದು ನೋಡುವ ದೃಷ್ಟಿಕೋನ ಮತ್ತೊಂದು ಕಾವ್ಯದ ಅನುಕರಣೆಯಲ್ಲಿ ಸ್ವಂತವಾದ ಪ್ರತಿಭೆಯನ್ನು ಹೊಂದಿರುವ ವಾಸ್ತವ ಅಂಶ ಕಾಣುತ್ತೇವೆ.

ಕಾವ್ಯ ಮೀಮಾಂಸೆ ಸತ್ಯ ಮತ್ತು ವಾಸ್ತವಗಳ ಸ್ವರೂಪವನ್ನು ತನ್ನದೇ ಆದ ರೀತಿಯಲ್ಲಿ ವಿವರಿಸಲು, ಗ್ರಹಿಸಲು ಪ್ರಯತ್ನಿಸುತ್ತದೆ. ಹಾಗಾಗಿ ಇದು ತತ್ವಶಾಸ್ತ್ರವಾದ ಒಂದು ಭಾಗವಾಗಿರುತ್ತದೆ. ಹಾಗೂ ಇದು ಪ್ರತ್ಯೇಕ ಸಂಕಥನ ಅಥವಾ ಶಾಸ್ತ್ರವಾಗಿ ಬೆಳೆಯುತ್ತ ತನ್ನದೇ ಆದ ಪಾರಿಭಾಷಿಕ ಸಮೂಹ ಬೆಳೆಸಿಕೊಳ್ಳುತ್ತದೆ.[4] ಮತ್ತು ತನ್ನ ವಿಚಾರ ಮಂಡನೆಯ ವಿಧಾನಗಳನ್ನು ಬೆಳೆಸಿಕೊಳ್ಳುತ್ತದೆ. ಉದಾಹರಣೆಗೆ ಸಂಸ್ಕೃತ ಕಾವ್ಯ ಮೀಮಾಂಸೆಯು ತನ್ನ ಲಕ್ಷಣ ನಿರೂಪಣೆಯನ್ನು ನಿದರ್ಶನ, ಪೂರ್ವಪಕ್ಷದ ವಾದದಮಂಡನೆಗಳ ಕುರಿತಂತೆ ತನ್ನದೇ ಆದ ಪದ್ಧತಿ ಬೆಳೆಸಿಕೊಂಡಿರುವುದನ್ನು ಕಾಣಬಹುದು. ಹೀಗೆ ಯಾವುದೇ ಅಧ್ಯಯನದ ಶಿಸ್ತು ತನ್ನದೇ ಆದ ಪರಿಷ್ಕೃತವಾದ ಭಾಷೆಯನ್ನು ಬೆಳೆಸಿಕೊಂಡಾಗ ಅದನ್ನು "ಆದಿಭಾಷೆ" ಅಥವಾ "ಮೆಟಾಲಾಂಗ್ವೆಜ್" ಎಂದು ಗುರುತಿಸಲಾಗುತ್ತದೆ.

ಹೀಗೆ ಸಾಹಿತ್ಯ ಚಿಂತನೆ ಪರಿಕಲ್ಪನೆ ಕವಿ, ಕೃತಿ, ಓದುಗ, ಪ್ರೇರಣೆ, ಪ್ರಭಾವ ಕುರಿತಾದ ಚರ್ಚೆಯನ್ನು ಈ ಅಧ್ಯಾಯ ಒಳಗೊಂಡಿದೆ.

# ಅಡಿ ಟಿಪ್ಪಣಿಗಳು

೧. ಜಿ.ಎಸ್. ಶಿವರುದ್ರಪ್ಪ, ಕನ್ನಡ ಕಾವ್ಯತತ್ವ ಚಿಂತನೆ, ಪುಟ–೪೮
೨. ಎಂ.ವಿ. ಸೀತಾರಾಮಯ್ಯ, ಕವಿರಾಜಮಾರ್ಗಂ, ಪುಟ–೧೯
೩. ಜಿ.ಎಸ್. ಶಿವರುದ್ರಪ್ಪ, ಕನ್ನಡ ಕವಿಗಳ ಕಾವ್ಯಕಲ್ಪನೆ, ಪುಟ–೧೫
೪. ತೀ.ನಂ.ಶ್ರೀ. ಭಾರತೀಯ ಕಾವ್ಯ ಮೀಮಾಂಸೆ, ಪುಟ–೯೧

## ಅಧ್ಯಾಯ ೫

# ಕನ್ನಡ ಸಾಹಿತ್ಯ ಚಿಂತನೆಯ ಸ್ವರೂಪ ಮತ್ತು ತತ್ವಗಳು

ಈ ಅಧ್ಯಯನವು ಕನ್ನಡ ಸಾಹಿತ್ಯ ಚಿಂತನೆಯ ಭಾರತೀಯ ಕಾವ್ಯ ಮೀಮಾಂಸೆಗಿಂತಲೂ ಭಿನ್ನವಾದ ವಿಚಾರಗಳನ್ನು ಒಳಗೊಂಡಿದ್ದರ ಬಗ್ಗೆ ಅವಲೋಕಿಸುತ್ತದೆ. ಕಾವ್ಯ, ಸ್ವರೂಪ, ಕವಿ, ಕೃತಿ, ಓದುಗ ನಡುವಿನ ಸಂಬಂಧಗಳು ಹಾಗೂ ಅವುಗಳ ಸ್ವರೂಪ ಕುರಿತಂತ ವಿಚಾರಗಳು ಸಂಸ್ಕೃತ ಕಾವ್ಯ ಚಿಂತನೆಗಿಂತ ಹೇಗೆ ಭಿನ್ನವಾಗಿರುತ್ತದೆ ಎಂಬುದರ ಬಗ್ಗೆಯೂ ಸ್ಥೂಲವಾಗಿ ವಿಶ್ಲೇಷಿಸುತ್ತದೆ.

ಕನ್ನಡ ಕಾವ್ಯ ಸ್ವರೂಪವು, ಸಂಸ್ಕೃತ ಕಾವ್ಯ ಪರಂಪರೆ ಹಾಗೂ ಪೂರ್ವದ ಕನ್ನಡ ಸಾಹಿತ್ಯ ಪರಂಪರೆಯೊಂದಿಗೆ ಕನ್ನಡ ಕವಿಗಳ ಸಂಬಂಧ ಹಾಗೂ ತೋರಿದ ಪ್ರತಿಕ್ರಿಯೆಗಳ ಹಿನ್ನೆಲೆಯಲ್ಲಿ ರೂಪಿತವಾಗಿದೆ. ಕನ್ನಡ ಸಾಹಿತ್ಯ ಸ್ವರೂಪವು ಪಂಪನ 'ಮೇಯ್ಗುಡಲೀಯದ', ಕುವೆಂಪುರ ಕನ್ನಡ ಬೇರೆ ಕತೆಯಂಬಂತೆ ಬೇರೆ ಮಯ್ಯಯಾಂತಂತೆ ಮರುಹುಟ್ಟು ಪಡೆದಂತೆ ಎಂಬಂತಹ ರೀತಿಯಲ್ಲಿ ಮೂಡಿದೆ

ಕಾವ್ಯಮೀಮಾಂಸೆ, ಕಾವ್ಯದ ಚರ್ಚೆ ಬೇರೆ ಬೇರೆಯಾಗಿಯೇ ಸಂಸ್ಕೃತ ಸಾಹಿತ್ಯ ಪರಂಪರೆಯಲ್ಲಿ ಬೆಳೆದರೆ, ಕನ್ನಡದಲ್ಲಿ ಕಾವ್ಯದ ಅಂಗವಾಗಿ ಕಾವ್ಯ ಚರ್ಚೆ ನಡೆದಿದೆ. ಹಳಗನ್ನಡ ಕಾವ್ಯ ಪೀಠಿಕಾ ಪ್ರಕರಣಗಳಲ್ಲಿ ಕಾವ್ಯ ಕಲ್ಪನೆ ಕುರಿತ ವಿಚಾರಗಳಿದ್ದು, ಸೃಜಶೀಲತೆಯ ಭಾಗವಾಗಿಯೇ ಕಾವ್ಯ ಚರ್ಚೆ ಬರುತ್ತದೆ. ಕಾವ್ಯದ ಭಾಗವಾಗಿಯೇ ಕವಿ, ಕಾವ್ಯ, ಚರ್ಚೆ, ಸತ್ಕವಿ ಪ್ರಶಂಸೆ ಕುಕವಿಯಿಂದ ಕನ್ನಡ ಕಾವ್ಯದಲ್ಲಿ ಕಂಡುಬಂದಿದೆ. ಕಾವ್ಯಾಂತಾರ್ಗತ ಕಾವ್ಯ ಚರ್ಚೆ ಜಿನಸೇನಾಚಾರ್ಯರ ಪೂರ್ವ ಪುರಾಣದಿಂದಲೇ ಆರಂಭವಾಗಿದ್ದರೂ ಈ ಸಂಪ್ರದಾಯ ಸಂಸ್ಕೃತ ಕಾವ್ಯ ಪರಂಪರೆಯಲ್ಲಿ ಕಾಣಲಾಗದು. ಪಂಪ ತನ್ನ ಎರಡು ಕೃತಿಗಳಲ್ಲಿ ಮೊದಲ ಬಾರಿಗೆ ಕನ್ನಡದಲ್ಲಿ ಈ ಸಂಪ್ರದಾಯ ಹುಟ್ಟು ಹಾಕಿದನು. ಕನ್ನಡ ಕಾವ್ಯ ಸಂದರ್ಭದಲ್ಲಿ ಕಾವ್ಯ ಕೇಂದ್ರಿತವಾಗಿಯೇ ಕಾವ್ಯ ಚರ್ಚೆ ನಡೆಯಿತು. ಕನ್ನಡ ಕಾವ್ಯದಲ್ಲಿ ಕಂಡುಬರುವ ಪೂರ್ವ ಕವಿಗಳ ಸ್ಮರಣೆ ಹಾಗೂ ಸ್ವ ಕಾವ್ಯದ ಪ್ರಶಂಸೆ ಕವಿಗಿರಬೇಕಾದ ಗುಣಗಳು ಹಾಗೂ ಕವಿಯ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದರೆ, ಸ್ವಕಾವ್ಯ ಪ್ರಶಂಸೆ, ಕಾವ್ಯ ಕುರಿತ ಕಲ್ಪನೆಗಳು ನಿಜವಾದ ಕಾವ್ಯ ಹೇಗಿರಬೇಕು

ಎಂಬ ವಿಚಾರಗಳು ಕುರಿತು ತಿಳಿಸುತ್ತವೆ.

"ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆನ್
ಕವಿ ವ್ಯಾಸನೆನ್ ಎಂಬ ಗರ್ವಮೆನಗಿಲ್ಲ;
ಅಪೂರ್ವಮಾಗೆಪೇಳ್ದ ಕವೀಶ್ವರರ್ ಇಲ್ಲ"[೧]

ಎಂಬ ಪಂಪನ ಈ ಕಾವ್ಯಗಳು ಕವಿಗಿರಬೇಕಾದ ವಿನಯ, ಪರಂಪರೆಯ ಪ್ರಜ್ಞೆ ಹಾಗೂ ಸ್ವಂತಿಕೆಯನ್ನು ರೂಪಿಸಿಕೊಳ್ಳುವ ಶಕ್ತಿ ಕುರಿತು ತಿಳಿಸಿದರೂ ಸಮಸ್ತ ಭಾರತ ಎಂಬ ತಂತ್ರದಲ್ಲಿ ತನ್ನ ಕೃತಿಯ ಅನನ್ಯತೆ ಸೂಚಿಸುತ್ತಾನೆ. ಹೀಗಾಗಿ ಪೂರ್ವ ಕವಿಗಳ ಸ್ಮರಣೆಯ ಸಂಪ್ರದಾಯವೊಂದು ಮೂಡಿತು:

"ಅಸಗನ, ಪೊನ್ನನ ಮಹೋನ್ನತಿವೆತ್ತ ಬೆಡಂಗು...
ಗುಣವರ್ಮನ ಜಾಣ್, ಕವಿರತ್ನನ ಓಜೆ..."

ತನ್ನ ಕೃತಿಯಲ್ಲಿ ನೆಲಸಲಿ ಎಂದು ನಯಸೇನನು ಧರ್ಮಾಮೃತದಲ್ಲಿ ಹೇಳಿದ್ದಾನೆ.

"ಎನಗೆ ಅನುಕೂಲಯಕ್ಕೆ ಗುಣವರ್ಮನ ಜಾಣ್ನುಡಿ, ಪಂಪನ ಇಂಪು,
ಪೊನ್ನನ ಬಗೆ... ಪುಷ್ಪಿ ಬಾಣನ ಮೃದು ಬಂಧ"

ಕೃತಿ ರಚನೆಯಲ್ಲಿ ನೆರವಾಗಲಿ ಎಂದು ಜನ್ನನು ಅನಂತನಾಥ ಪುರಾಣದಲ್ಲಿ ಹೇಳಿದ್ದಾನೆ.[೨]
(ಜಿ.ಎಸ್. ಶಿವರುದ್ರಪ್ಪ: ಕನ್ನಡ ಕವಿಗಳ ಕಾವ್ಯ ಕಲ್ಪನೆ: ಪು-೧೬-೧೭)

ಮೇಲಿನ ಕವಿಗಳ ಕಾವ್ಯದ ಸಾಲುಗಳು ಪೂರ್ವ ಕವಿಗಳ ಕಾವ್ಯ ಲಕ್ಷಣ ತಿಳಿಸುತ್ತಲೇ ಕಾವ್ಯ ಚರ್ಚೆ ಎಂಬುದು ಸಾಹಿತ್ಯ ಪರಂಪರೆಯೊಂದರಲ್ಲಿ ಬೆಳೆಯುವಂತಹದ್ದು ಎಂಬುದನ್ನು ತಿಳಿಸುತ್ತದೆ.

"ಅವರಿವರ ಮಾತುಗಳನ್ನು ನೆನೆನೆನೆದು ತನ್ನ ಕೃತಿಯಲ್ಲಿಡುವವನ ಕೃತಿ
ಗುಹಾಧ್ವನಿಯ ಹಾಗೆ ಅರ್ಥಹೀನವಾದ ವಚನಗಳನ್ನುಳ್ಳದ್ದಾಗುತ್ತದೆ"
ಎಂದು 'ಕವಿರಾಜಮಾರ್ಗಕಾರನು' ಹೇಳುತ್ತಾನೆ.

"ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ'
ಕುಮಾರವ್ಯಾಸ

'ಪರರೊಡನೆಯ ಕೊಂಡು ಪೇಳಿದ ಭಾಷೆ ಅಥವಾ ಪ್ರತಿಜ್ಞೆ ತನ್ನದು'
ರಾಘವಾಂಕ

"ಪೆರರ ನುಡಿ, ಪರರ ಮಾರ್ಗಂ, ಪೆರರರ್ಥ, ಪೆರರ ದೇಸಿ,
ಪೆರರ ಓಜೆಯೆನಲ್, ಪೆರರ ಬಳಿಸಂದು ತನ್ನ ಮರವಂ ಕವಿಯಲ್ಲಂ"[೩]

ನಾಗಚಂದ್ರ: ಮಲ್ಲಿನಾಥ ಪುರಾಣ (ಜಿ.ಎಸ್. ಶಿವರುದ್ರಪ್ಪ:೧೯೮೯:ಪು-೧೯)

ಮೇಲಿನ ಅನೇಕ ಕವಿಗಳ ಸಾಲುಗಳು ಸ್ವಕಾವ್ಯ ಪ್ರಶಂಸೆ, ಕೃತಿಯ ಅನನ್ಯತೆಯನ್ನು ತಿಳಿಸುತ್ತವೆ. ಹಾಗೂ ವ್ಯಕ್ತಿ ವಿಶಿಷ್ಟತಾಭಿವ್ಯಕ್ತಿಯನ್ನು ಸಾಧಿಸುವ ಅಪೇಕ್ಷೆಯನ್ನು ತಿಳಿಸುತ್ತದೆ. ಇವುಗಳೇ ಕನ್ನಡ ಕಾವ್ಯದ ಪ್ರಮುಖ ಲಕ್ಷಣ ಹಾಗೂ ಸ್ವರೂಪ ಎಂಬಂಥ ರೀತಿಯಲ್ಲಿರುವುದನ್ನು ಗಮನಿಸಬೇಕು.

ಸಾಹಿತ್ಯವೆಂಬುದು ಎಲ್ಲ ಕವಿಗಳಿಗೂ ಸಮಾನವಾದ ಭಾಷೆ ಸಾಮಗ್ರಿಯಿಂದಲೇ ಹುಟ್ಟಿದರೂ ಆಯಾ ಕವಿಯ ವಿಚಕ್ಷಣತೆಯಿಂದ ಪ್ರತಿಭೆಯಿಂದ ಬೇರೆ, ಬೇರೆ ಯಾಗುತ್ತದೆ. ಎಂಬ ಅಂಶಗಳನ್ನು ಹಾಗೂ ಸರಸ್ವತಿ ಕುರಿತ ವರ್ಣನೆಯ ಕನ್ನಡಿಗರ ಕಾವ್ಯತತ್ವದ ವಿಚಾರಗಳನ್ನು ಒಳಗೊಂಡಿರುವಂತಹದ್ದನ್ನು ಈ ಕೆಳಗಿನ ಕವಿಗಳ ಕಾವ್ಯದ ಸಾಲುಗಳನ್ನು ಗಮನಿಸುವುದರ ಮೂಲಕ ತಿಳಿಯಬಹುದು.

"ಇದು ನಿಚ್ಚಂ ಪೊಸತು ಅರ್ಣವಂಬೊಲತಿ ಗಂಭೀರಂ ಕವಿತ್ವಂ"

ಪಂಪ.

"ಪರಮ ಜನೇಂದ್ರ ವಾಣಿಯೆ ಸರಸ್ವತಿಬೇರದು ಪೆಣ್ಣರೂಪಮಂ ಧರಿಯಿಸಿ ನಿಂದುದಲ್ತು"

ಪಂಪ, ಆದಿಪುರಾಣ.

"ಕವಿತಾಶಕ್ತಿ ಸುರೇಂದ್ರಧೇನು ಅದು ಪುಣ್ಯಾಯತ್ತಾಂ"

ಜನ್ನ ಅನಂಥಪುರಾಣ

"ಮಳೆಯಲ್ಲದೆ ಪೊಯ್ನಿರಿಂ ಬೆಳಗುಮಧರೆ"

ನಯಸೇನ, ಧರ್ಮಾಮೃತ

"ಸರ್ವಾಂಗ ಸುಂದರಿ ವಿದ್ಯಾನಟಿ ನಾಟಕಂ-ನಲಿಗೆ-ಮತ್ಕಾವ್ಯಸ್ಥಲೀ ರಂಗದೊಳ್
ಜನವಿಲೋಚನೆ ಪ್ರತಿಮೆ ಪ್ರಭಾವರಪ್ಪಾದಿ ಕವೀಶ್ವರರ್"

ನಾಗಚಂದ್ರ[೪]

ಪ್ರತಿಭೆ ಅಥವಾ ಕವಿತಾಶಕ್ತಿ ಕುರಿತ ಭಾರತೀಯ ಮೀಮಾಂಸಕರ ವಿಚಾರಗಳಿಗೆ ಪೂರಕವಾಗಿ ನಮ್ಮ ಕವಿಗಳ ವಿಚಾರಗಳನ್ನು ಕಾಣಬಹುದು. ಆದರೆ ಕನ್ನಡ ಕವಿಗಳ

ಕಾವ್ಯ ಕಲ್ಪನೆ ಸರಸ್ವತಿ ತತ್ವ್ತದಲ್ಲಿ ಕಂಡು ಬಂದರೂ ಕೆಲವು ಕವಿಗಳಲ್ಲಿ ವೈದಿಕರ ಸರಸ್ವತಿ ಕಲ್ಪನೆಯ ವಿರೋಧದಲ್ಲಿಯೂ ಕಂಡು ಬಂದಿರುವುದು ಕಾಣಬಹುದು. ಈ ಕಲ್ಪನೆ ಭಾರತೀಯ ಕಾವ್ಯ ಮೀಮಾಂಸಕರ ಕಾವ್ಯ ಚಿಂತನೆಗಳಿಗಿಂತ ಭಿನ್ನವಾದುದು.

'ಇದು ನಿಚ್ಚಂ ಪೊಸತು' ಎಂಬುದು ಕಾವ್ಯದ ಗಂಭಿರತೆ, ಆಳ. ಮೌಲಿಕತೆಯನ್ನು ವ್ಯಕ್ತಪಡಿಸುವುದು ನೋಡಬಹುದು. ಕಾವ್ಯ ನಾಟಕದ ತಿರುಳು ಒಂದೇ. ಕಾವ್ಯ ಎಂಬುದು ವಾಸ್ತವವಾಗಿ ನಾಟಕ, ಅಥವಾ ದೃಶ್ಯ ಕಾವ್ಯ ಎಂಬುದನ್ನು ನಾಗಚಂದ್ರ, ನೇಮಿಚಂದ್ರರು ವ್ಯಕ್ತಪಡಿಸುತ್ತಾರೆ. ಹಾಗೂ ಇಲ್ಲಿಯೇ ಜನಾಂತರ ದೃಷ್ಟಿ ಎಂಬ ಪದವನ್ನು ಬಳಸುತ್ತಾರೆ. ಜನ ಸಮುದಾಯದಲ್ಲಿ ಸುಪ್ತವಾಗಿರುವ ದೃಷ್ಟಿ ಅಥವಾ ಒಂದು ಯುಗದ ಜನತೆಯ ಅಂತರಾಳವನ್ನು ಕೃತಿಯ ಮೂಲಕ ಅಭಿವ್ಯಕ್ತಿಸುವ ಕವಿಯ ದೃಷ್ಟಿ ಎಂದರ್ಥ ಈ ವಿಚಾರಗಳು ಭಾರತೀಯ ಕಾವ್ಯ ಮೀಮಾಂಸೆಗೆ ಅಪರಿಚಿತವಾದುದು.

ಕಾವ್ಯ ಸತ್ಯ ಅಷ್ಟಾದಶವರ್ಣನೆಗಳನ್ನು ಕನ್ನಡ ಕಾವ್ಯ ಪರಂಪರೆಯಲ್ಲಿ ಕಾಣಬಹುದು. ಅಷ್ಟಾದಶವರ್ಣನೆಯನ್ನು ಅಪ್ರಜ್ಞಪೂರ್ವಕವಗಿ ಬಳಸಿದ್ದಾರೆ. ೧೨ನೇ ಶತಮಾನದಿಂದಾಚೆ ಹರಿಹರ ರಾಘವಾಂಕ, ವಿರೂಪಾಕ್ಷ ಪಂಡಿತ ಅವರ ವಿರುದ್ದವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದಾರೆ.

ಕಾವ್ಯ ಅನ್ನುವುದು ಕವಿಯ ಶಾಸನಕ್ಕೆ ಒಳಗಾದ ಆದಿಪತ್ಯ ಎನ್ನುತ್ತೇನೆ. ಹರಿಹರ ಹಾಗು "ಕಾವ್ಯಂ ಕಲ್ಪಾಂತರ ಸ್ಥಾಯಿಯೆನಿಪ ನುಡಿ ಸತ್ಯಂ, ಕವಿಶಾಧಿಪತ್ಯಂ"[3] ಎಂದು ತಿಳಿಸುತ್ತಾನೆ. ಈ ವಾಕ್ಯಗಳು ಕವಿಗಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹಾಗೂ ಓದುಗನ ದೃಷ್ಟಿ ಕುರಿತಂಥ ವಿಚಾರಗಳನ್ನು ತಿಳಿಸುತ್ತದೆ. ಕನ್ನಡ ಕಾವ್ಯದಲ್ಲಿ ಬರುವ ವಸ್ತುಕ– ವರ್ಣಕಗಳೆಂಬ ಕಾವ್ಯ ಪ್ರತಿಭೆಗಳ ಸಂಗತಿ ಸಂಸ್ಕೃತ ಲಾಕ್ಷಣಿತರಲ್ಲಿರದ ಕಾರಣ ಈ ವಿಚಾರ ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡಿಗರ ಕೊಡುಗೆಯಾಗಿದೆ. ಈ ಪ್ರಭೇದಗಳು ನಿರ್ದಿಷ್ಟವಾಗಿ ಏನನ್ನು ಸೂಚಿಸುತ್ತದೆ. ಎಂಬುದರ ಬಗ್ಗೆ ಖಚಿತ ನಿಲುವಿಲ್ಲದಿದ್ದರೂ ಅದರ ವೈಶಿಷ್ಟ್ಯವನ್ನು ಅರಿಯಬಹುದು.

ಕನ್ನಡ ಕಾವ್ಯಗಳ ವಸ್ತುವೂ ಕೂಡಾ ಕವಿ–ಕಾವ್ಯ ಕುರಿತಂತೆ ವಿಚಾರಗಳನ್ನು ವ್ಯಕ್ತಪಡಿಸುತ್ತದೆ. ಸಂಸ್ಕೃತಕಾವ್ಯ ಪರಂಪರೆಯಲ್ಲಿ ಕಾಣದ ವೈಶಿಷ್ಟ್ಯಗಳನ್ನು ಕಾಣಬಹುದು. ಮಹಾಭಾರತ, ರಾಮಾಯಣ, ಜೈನ, ಶೈವ ವಿಷ್ಣು ಪುರಾಣಗಳು ಕನ್ನಡ ಕಾವ್ಯ ಪರಂಪರೆಯನ್ನು ನಿಯಂತ್ರಿಸಿದೆ. ಹಾಗೂ ಕನ್ನಡ ಸಾಹಿತ್ಯ ಚಿಂತನೆಯ ಕಥನ ಸಂಪ್ರದಾಯವನ್ನು ಒಳಗೊಂಡಿದೆ. ಕನ್ನಡದ ಕಾವ್ಯದಲ್ಲಿ ವೈದಿಕರ ಚಾತುರ್ ವರ್ಣದ ಕಲ್ಪನೆಗಳು ತಲೆಕೆಳಗಾಗಿದ್ದು ವಿಭಿನ್ನವಾಗಿ ಅಭಿವ್ಯಕ್ತವಾಗಿದೆ. ಮಹಾಭಾರತ ಕಥಾವಸ್ತುವಿಗೆ ಪ್ರಾದೇಶಿಕತೆಯಲ್ಲಿ ಸಮಿಕರಣ ಕಂಡುಕೊಳ್ಳಲಾಗಿದೆ. ಲೌಕಿಕ, ಆಗಮಿಕ ಸಾಹಿತ್ಯ ಪರಂಪರೆಯಲ್ಲಿ ಕಾಣಲಾಗುವುದಿಲ್ಲ.

ಪ್ರಾದೇಶಿಕ ವಸ್ತು, ವ್ಯಕ್ತಿ, ಕಾಲ ದೇಶಗಳನ್ನು ಪೌರಾಣಿಕ ಹಾಗೂ ಸಾರ್ವತ್ರಿಕ ನೆಲೆಗಳಿಗೆ ಏರಿಸುತ್ತಾ, ಮಹಾಭಾರತ, ರಾಮಾಯಣಗಳ ಕಥಾವಸ್ತು ನಾಯಕರುಗಳನ್ನು ಕಾಲ,

ದೇಶಗಳನ್ನು ಸ್ಥಳಿಯ ಹಾಗೂ ನಿರ್ದಿಷ್ಟ ಪ್ರಾದೇಶಿಕ ಮೂಲಗಳಿಗೆ ಇಳಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಕವಿಗಳು ತಮ್ಮ ವಿಚಾರ ಮತ್ತು ದ್ವಂದ್ವಗಳನ್ನು ಅಳವಡಿಸಿರುವುದನ್ನು ಕಾಣಬಹುದು. ವಸ್ತು ನಿರ್ವಹಣೆಯ ಈ ದೃಷ್ಟಿಕೋನ ಕನ್ನಡ ಕವಿಗಳ ಸಾಹಿತ್ಯ ಕಲ್ಪನೆಯ ವಿಶಿಷ್ಠ ಅಂಶವಾಗಿದೆ.

ಕಥಾ ವಸ್ತುವಿನ ನಿರ್ವಹಣೆಯಲ್ಲಿ ತೋರಿದ ಸ್ವಾತಂತ್ರ್ಯವು ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸೂಚಿಸುತ್ತದೆ.

'ಪೆರರೀವುದೇಂ, ಪೆರರ ಮಾಡುವುದೇಂ, ಪೆರರಿಂದವುಪ್ಪುದೇಂ'–ಪಂಪ.

'ಎರಗುವೇನ್ ಅರುಹಂಗೆ, ಉಳಿದವರ್ಗೆರಗಂ'–ಆಂಡಯ್ಯ

'ಹರನಲ್ಲ ದನ್ಯ ದೈವಗಳಿಗೆರಗದ ಭಾಷೆ ತನ್ನದು'–ರಾಘವಾಂಕ.[೬]

ಮೇಲಿನ ಅನೇಕ ಸಾಲುಗಳು ಕವಿಯ ವ್ಯಕ್ತಿತ್ವಕ್ಕೆ ಇರಲೇಬೇಕಾದ ಸ್ವಾತಂತ್ರ್ಯ ಕುರಿತು, ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯ ಹೇಳುತ್ತದೆ. ೧೨ನೇ ಶತಮಾನದಿಂದಾಚೆಗೆ ಅಂದರೆ ಭಕ್ತಿ ಪಂಥದ ಹೊತ್ತಿಗೆ ಕೃತಿಗೂ, ಕವಿಗೂ ನಡುವೆ ಅಭೇದ್ಯತೆ ಹಾಗೂ ವ್ಯಕ್ತಿ ನಿರಸನ ಕವಿ ದಿವ್ಯಶಕ್ತಿಯ ಅಧೀನ ಎಂಬಂಥ ಅಂಶಗಳು ಕಂಡುಬರುತ್ತವೆ.

ಕಾವ್ಯ ಸತ್ಯ, ಅಷ್ಟಾದಶವರ್ಣನೆಗಳೊಂದಿಗೆ, ಶೈಲಿಯ ಕುರಿತು ಕನ್ನಡ ಕವಿಗಳು ತಮ್ಮದೇ ಆದ ನಿಲುವುಗಳನ್ನು ಹೊಂದಿದ್ದರು. ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ಇದರ ಚರ್ಚೆ ಕಂಡುಬರುವುದಿಲ್ಲ. ಆದರೆ ಪ್ರಾದೇಶಿಕ ಭಾಷಾ ಲಕ್ಷಣಗಳಿಗುಣವಾಗಿ ಈ ರೀತಿ ಭೇದಗಳನ್ನು ಗುರುತಿಸುತ್ತಾರೆ. "ಕನ್ನಡ ಕವಿಗಳು ಸಂಸ್ಕೃತ ಭಾಷೆ ಹಾಗೂ ಸಾಹಿತ್ಯಕ್ಕೆ ತಮ್ಮ ಕೃತಿ ರಚನೆಯ ಸಂದರ್ಭದಲ್ಲಿ ತೋರಿದ ಕ್ರಿಯೆ–ಪ್ರಕ್ರಿಯೆಗಳೇ ಶೈಲಿಯ ಸ್ವರೂಪ ಹಾಗೂ ಸಮಸ್ಯೆಯನ್ನು ಪ್ರಕಟಿಸುತ್ತದೆ" ಎಂದು ಜಿ.ಎಸ್. ಶಿವರುದ್ರಪ್ಪ ಹೇಳುತ್ತಾರೆ. ಕನ್ನಡ ಕವಿಗಳ ಪ್ರತಿಕ್ರಿಯೆಗಳನ್ನು ಮೂರು ಬಗೆಯಾಗಿ ಗುರುತಿಸಬಹುದು.

೧. ಸಂಸ್ಕೃತವನ್ನು ಕನ್ನಡ ಕಾವ್ಯ ರಚನೆಯ ಆತಂಕವೆಂದು ಭಾವಿಸದೆ ಅನುಕೂಲವೆಂದು ತಿಳಿದ ಪ್ರೌಢಕವಿಗಳ ಧೋರಣೆ ಇದರಿಂದ ನಿಷ್ಪನ್ನವಾದ ರೀತಿಯನ್ನೆ ಮಾರ್ಗವೆಂದು ಕರೆಯಬಹುದು.

೨. ಕನ್ನಡಕ್ಕೆ ಅದರದೇ ಆದ ಸತ್ವವಿರುವಾಗ, ಆಡು ನುಡಿಗೆ ಸಮೀಪವಾದ ರೀತಿಯಲ್ಲಿ ಕಾವ್ಯ ಭಾಷೆಯನ್ನು ರೂಪಿಸಿಕೊಳ್ಳುವುದು. ಇದನ್ನು ದೇಸೀಯೆಂದು ಕರೆಯಬಹುದು.

೩. ಕನ್ನಡದಂತೆ ಸಂಸ್ಕೃತವೂ ನಮ್ಮದು, ಕನ್ನಡದ ಸೊಗಸು ಹಾಳಾಗದಂತೆ ನೋಡಿಕೊಳ್ಳುತ್ತಲೇ ಸಂಸ್ಕೃತದ ಪ್ರೌಢಮೆ, ಆಡುನುಡಿಯೊಂದಿಗೆ ಒಡಬಂಡಿಕೆ ಸಾಧಿಸುವುದು. ಇದು ಮಾರ್ಗ ದೇಸೀಗಳ ಸಮನ್ವಯ ಶೈಲಿ ಶ್ರೀ ವಿಜಯನು ಹೇಳುವ "ನಾಳ್ನುಡಿಯ ಬೆಡಂಗು", ಪಂಪನ ತನ್ನ ಕೃತಿಯು "ಸಾಜದ ಪುಲಗೆರೆಯ ತಿರುಳ್

ಗನ್ನಡದಲ್ಲಿ" ರೂಪಿತವಾಗಿದೆ. ಎಂಬ ಅಂಶಗಳು ನಯಸೇನನು "ಸಕ್ಕದಮಂ ಪೇಳ್ವಾತೆ ನರ ಸಕ್ಕದಮಂ ಪೇಳ್ಗೆ ಸುದ್ದಗನ್ನಡದೊಳ್ ತಂದಿಕ್ಕುವುದೆ ಸಕ್ಕದಮಂ ತಕ್ಕದೆ ಬೆರಸಲ್ಕೆ ಘೃತಮುಮಂ ತೈಲಮುಮಂ"[೬]

ಎಂಬ ಅಭಿಪ್ರಾಯಗಳು ಕನ್ನಡ ಕಾವ್ಯ ಶೈಲಿಯನ್ನು ಕುರಿತು ತಿಳಿಸುತ್ತದೆ. ಶ್ರೀ ವಿಜಯ ಆಡುನುಡಿಯ ಬಳಕೆಯ ಬಗ್ಗೆ ಭಾಷಾ ಮಿಶ್ರಣದ ಬಗ್ಗೆ ತಿಳಿಸಿದರೆ, ದ್ವಿಭಾಷಿಕ ಸಂದರ್ಭದಲ್ಲಿ ಕಾವ್ಯ ರಚನೆಯಲ್ಲಿ ಸಂಸ್ಕೃತದೊಂದಿಗಿನ ಒಡಂಬಡಿಕೆಯೊಂದಿಗೆ, ಕನ್ನಡದ ದೇಸೀಯತೆಯನ್ನು ಉಳಿಸಿಕೊಳ್ಳುತ್ತಲೇ ಕಾವ್ಯ ರಚನೆ ರೀತಿಯನ್ನು ರೂಪಿಸಿಕೊಳ್ಳಬೇಕಾದುದನ್ನು ಪಂಪ ತಿಳಿಸುತ್ತಾನೆ. ಕನ್ನಡಕ್ಕೆ ಅದರದೇ ಆದ ಸತ್ವವಿರುವಾಗ ಈ ರೀತಿಯ ಮಿಶ್ರಣಗಳು ಸರಿಯೇ ಎಂದು ನಯಸೇನ ಪ್ರಶ್ನಿಸುತ್ತಾನೆ. ಈ ಶೈಲಿ ಸ್ವರೂಪ ಕುರಿತ ಚಿಂತನೆಗಳು, ಸಾಲುಗಳು ಒಂದು ರೀತಿಯಲ್ಲಿ ಕನ್ನಡ ಕಾವ್ಯ ಸ್ವರೂಪವನ್ನೆ ತಿಳಿಸುತ್ತದೆ. ಕನ್ನಡ ಕಾವ್ಯ ಚರಿತ್ರೆಯುದ್ದಕ್ಕೂ ಮಾಡಿಕೊಂಡು ಬಂದಿರುವರು ಒಡಂಬಡಿಕೆಗಳು, ಅದರ ಮೂಲಕ ಪಡೆದಿರುವ ಸ್ವರೂಪಗಳ ಕುರಿತ ಚರ್ಚೆಯೇ ಆಗಿದೆ ಎನಿಸುತ್ತದೆ.

ಮುಂದಿನ ಕೆಲವು ಪುಟಗಳಲ್ಲಿ ಕವಿ, ಕೃತಿ, ಓದುಗ ಸಂಬಂಧದ ಹಿನ್ನೆಲೆಯಲ್ಲಿ ಕಾವ್ಯ ಸ್ವರೂಪವನ್ನು ಗುರುತಿಸುವ ಪ್ರಯತ್ನಗಳಿವೆ. ಇದುವರೆಗೆ ಕವಿಗಳು ರಚಿಸಿರುವ ಕೃತಿಗಳ ಕೆಲವು ಸಾಲುಗಳ ಹಿನ್ನೆಲೆಯಲ್ಲಿ ಕವಿಯ ಸ್ವರೂಪ, ಸಾಹಿತ್ಯ ಕುರಿತ ಚಿಂತನೆಗಳನ್ನು ವ್ಯಕ್ತಪಡಿಸಲಾಗಿದ್ದಾರೆ. ಇಲ್ಲಿ ಕಾವ್ಯಾನುಭವದ ಹಿನ್ನೆಲೆಯಲ್ಲಿ ಸಹೃದಯನ ದೃಷ್ಟಿಯ ಹಿನ್ನೆಲೆಯಲ್ಲಿ ಕಾವ್ಯದಿಂದುಟಾಗುವ ಪ್ರಯೋಜನಗಳ ಹಿನ್ನೆಲೆಯಲ್ಲಿ ಕಾವ್ಯ ಅಥವಾ ಕೃತಿಯ ಸ್ವರೂಪವನ್ನು ಗುರುತಿಸಲಾಗುತ್ತದೆ. ಸಹೃದಯರನ್ನು ಕುರಿತು ಕನ್ನಡ ಕವಿಗಳಿಗಿದ್ದ ಅಭಿಪ್ರಾಯ ಹಾಗೂ ಕುಕವಿ, ಕುಕಾವ್ಯದ ನಿಂದನೆಯ ಹಿನ್ನೆಲೆಯಲ್ಲಿ ಕವಿಯ ಹಾಗೂ ಕಾವ್ಯದ ಸ್ವರೂಪವನ್ನು ಗುರುತಿಸುವ ಪ್ರಯತ್ನಗಳಿವೆ.

"ಕವಿ ಸಹೃದಯಾಖ್ಯಾಂ" ಎಂದು ಕಾವ್ಯತತ್ವವನ್ನು ಕರೆದಿದ್ದು ಕಾವ್ಯಾನುಭವದ ಚರ್ಚೆಯನ್ನು ಸಹೃದಯಾನುಭವದ ಹಿನ್ನೆಲೆಯಲ್ಲಿ ಮಾಡಲಾಗಿದೆ. ಕವಿ, ಕೃತಿ, ಓದುಗ, ಸ್ವರೂಪ 'ಸಂವಹನೆಯ ಬಗೆಗಳಲ್ಲಿ' ನಿರ್ಧರಿತವಾಗುತ್ತದೆ. ಕಾವ್ಯದ ಅಸ್ತಿತ್ವ ಹಾಗೂ ಸಾರ್ಥಕತೆಗಳೆರಡೂ ಸಹೃದಯನ ಅನಿಸಿಕೆಗಳಲ್ಲಿರುತ್ತವೆ. ಸಹೃದಯ ಕಾವ್ಯವನ್ನು ಮೆಚ್ಚಿದಲ್ಲಿ ಮಾತ್ರ ಕಾವ್ಯ ಪರಿಪೂರ್ಣಗೊಂಡು ಕವಿಯು ಕೃತಾರ್ಥನಾಗುತ್ತಾನೆ. ಕಟ್ಟಿಯುಮೇನೋ ಮಾಲೆಗಾರನ ಪೊಸ ಬಾಸಿಗಂ ಕಟ್ಟಿ ಮುಡಿದ ಭೋಗಿಗಳಿಲ್ಲದೆ ಬಾಡಿ ಪೋಗದೆ–ಜನ್ನ ಅನಂತನಾಥ ಪುರಾಣ

ಕವಿಯಧಿಕನಿರ್ದೊಡೆಂ ಕೇಳ್ವರಿಲ್ಲದೊಡೆ–ರಾಘವಾಂಕ

ಪಟ್ಟಪಾಡೇನಗಿರಲಿ ಅದರ ಹಾಡಿನಷ್ಟೆ ನೀಡುವೆನು ರಸಿಕ ನಿನಗೆ ಕಲ್ಲುಸಕ್ಕರೆಯಂಥ

ನಿನ್ನದೆಯು ಕರಗಿದರೆ ಆ ಸವಿಯ ಉಣಿಸು ನನಗೆ–ಬೇಂದ್ರೆ

ಮೇಲಿನ ಸಾಲುಗಳು ಸಹೃದಯನ ಕುರಿತದ್ದಾಗಿದೆ. ಈ ಸಹೃದಯರನ್ನು ಎರಡು ರೀತಿಯಲ್ಲಿ ವರ್ಗೀಕರಿಸಬಹುದು.

೧. ಪಂಡಿತವರ್ಗದ ಕಾವ್ಯಗಳನ್ನು ಆಸ್ವಾದಿಸುವ ಸಹೃದಯ ವರ್ಗ

೨. ಬಹುಸಂಖ್ಯಾತ ಅನಕ್ಷರಸ್ಥ ಶ್ರಾವಕ ಸಂಪ್ರದಾಯ ವರ್ಗ

ಸ್ಥೂಲವಾಗಿ ನಿರೂಪಿಸುವುದಾದರೆ ಕೃತಿಗಳನ್ನು ತಾವಾಗಿಯೇ ಓದಿಕೊಳ್ಳಬಲ್ಲ ಓದುಗ ವರ್ಗ ಹಾಗೂ ಶ್ರಾವಕ ವರ್ಗ. ಈ ವರ್ಗಗಳೆ ಕನ್ನಡ ಸಾಹಿತ್ಯದ ರೂಪ, ರೀತಿ, ಧೋರಣೆಗಳನ್ನು ನಿರ್ಧರಿಸಿವೆ. ಭಾಷಿಕ ಬರವಣಿಗೆಯ ರೂಪಗಳಾದ ಮಾರ್ಗ, ದೇಸೀ ಪರಿಕಲ್ಪನೆಗಳು ಕೂಡಾ ಹಾಗೂ ಕಾವ್ಯ ಭಾಷೆಯ ಪ್ರೌಡಿಮೆ, ಗೇಯತೆಯ ಲಕ್ಷಣಗಳು ಕೂಡಾ ಸಹೃದಯನಿಂದಲೇ ರೂಪಿತಗೊಂಡವು. ಪೇಳ್ವೊಡೆ ಪಂಪನ ಪೇಳ್ಗುಂ ಎಂದವರು ಸಹೃದಯರೇ ಈ ಸಹೃದಯರನ್ನು ಕುರಿತು ಕನ್ನಡ ಕವಿಗಳು ತಮ್ಮ ಕೃತಿಗಳನ್ನು ಮೆಚ್ಚುವ, ಮೆಚ್ಚದಿರುವ ಸಂದರ್ಭದಲ್ಲಿ ಅವರ ಸ್ವರೂಪ ಕುರಿತಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಸಹೃದಯವನ್ನು ಕುಜನ, ವರ್ಣಿಸಿದ್ದು ಕಂಡು ಬರುತ್ತದೆ.

"ಸಾರಣೆಯಂತಿರೆ ಕಸಮನೆ ಪಿಡಿವರ್ ಕೆಲಬರ್ ಮಹಾಪುರುಷರ್ತಳ್" (ಜರಡಿಯ ಹಾಗೆ ಕಸವನ್ನು ಹಿಡಿಯುವರು)–ರನ್ನ, ಅಜಿತ ಪುರಾಣ

"ಎಡೆವಾಯ್ದು ಬಂದಿ ತಪ್ಪನ್ನೇ ಹಿಡಿದು, ಕಾವ್ಯದಲ್ಲಿ ಕಡೆತನಕ ಬಂದ ಲೇಸನ್ನು ಕಾಣಬಹುದು"–ರಾಘವಾಂಕ. ಹರಿಶ್ಚಂದ್ರ ಕಾವ್ಯ

ಈ ರೀತಿಯಾಗಿ ಕುಜನರನ್ನು ಕುರಿತು ಕವಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕಾವ್ಯದ ಪ್ರಯೋಜನ ಕುರಿತಂತೆ ಕನ್ನಡ ಕವಿಗಳು ಸಂಸ್ಕೃತ ಮಿಮಾಂಸಕರೊಂದಿಗೆ ಸಹಮತದಿಂದಿದ್ದಾರೆ. ಆನಂದ ಅಥವಾ ಸಂತೋಷವೇ ಕಾವ್ಯದ ಪ್ರಮುಖ ಪ್ರಯೋಜನ ಎಂದು ಗುರುತಿಸುತ್ತಾರೆ. ಮಾರ್ಗ ಕಾವ್ಯಗಳಲ್ಲಿ ಕಾವ್ಯ ಕುರಿತ ಚರ್ಚೆ, ಕಾವ್ಯದ ಸಮರ್ಥನೆ, ಕುಕವಿ, ಅಕಾವ್ಯದ ನಿಂದನೆಗಳನ್ನು ಕಾಣಬಹುದು. ಮಾರ್ಗದಲ್ಲಿ ಕವಿ ತನ್ನ ಕೃತಿಯ ವಸ್ತು ರೀತಿ ಉದ್ದೇಶಗಳನ್ನು ತಿಳಿಸುತ್ತಾ ಅದರ ಗುಣ ದೋಷಗಳಿಗೆ ತಾನೇ ಜವಾಬ್ದಾರಾ ಎಂಬ ಪ್ರಜ್ಞೆ ಉಳ್ಳವನಾಗಿರುತ್ತಾನೆ. ಹಾಗೂ ತನ್ನ ಮತ್ತು ಇತರ ಕಾವ್ಯ ಕುರಿತಂತೆ, ಕಾವ್ಯ ಸ್ವರೂಪ ಕುರಿತಂತೆಯೇ ಚಿಂತಿಸುತ್ತಾನೆ. ಇಲ್ಲಿ ಕವಿ ಜವಾಬ್ದಾರಿಯುತ ವ್ಯಕ್ತಿಯಾಗಿ ಕಂಡು ಬರುತ್ತಾನೆ. ದೇಸೀ ಕಾವ್ಯಗಳು ಆಧ್ಯಾತ್ಮ ಕುರಿತ ಚರ್ಚೆಯನ್ನು ಹೆಚ್ಚು ಒಳಗೊಂಡಿರುತ್ತದೆ. ಇಲ್ಲಿ ಕವಿ ದೈವಿಶಕ್ತಿಗೆ ತನ್ನನ್ನು ಅರ್ಪಿಸಿಕೊಂಡಿರುತ್ತಾನೆ. ಹಾಗಾಗಿ ಇಲ್ಲಿ ಕವಿ ಹೆಚ್ಚು ಸ್ವತಂತ್ರ ಎಂದೆನಿಸುವುದಿಲ್ಲ. ಹಾಗೂ ಪ್ರತ್ಯೇಕವಾಗಿ ಹೇಳಿಕೊಳ್ಳಬಹುದಾದ ಕಾವ್ಯ ಪರವಾದ ವಿಚಾರಗಳು ಕಂಡು ಬರುವುದಿಲ್ಲ. ಕೆಟ್ಟಕಾವ್ಯ ಕುರಿತ ಕನ್ನಡ ಕವಿಗಳ ಪ್ರತಿಕ್ರಿಯೆಗಳು ಪರೋಕ್ಷವಾಗಿ ಒಳ್ಳೆಯ ಕಾವ್ಯ ಹೇಗಿರಬೇಕು ಎಂಬಂಥ ವಿಚಾರವನ್ನೇ ವ್ಯಕ್ತಪಡಿಸುತ್ತದೆ.

"ಲಲಿತ ಪದಂ ಪ್ರಸನ್ನ ಕವಿತಾಗುಣವಿಲ್ಲದೆ" ಕಾವ್ಯ ಕಾವ್ಯವೇ ಅಲ್ಲ ಎಂದು ಪಂಪ

"ಲಲಿತ ಪದಂ ಪ್ರಸನ್ನ ಕವಿತಾಗುಣವಿಲ್ಲದೆ" ಕಾವ್ಯ ಕಾವ್ಯವೇ ಅಲ್ಲ ಎಂದು ಪಂಪ ಹೇಳಿದ ಮಾತು ಕಾವ್ಯ ಕಲ್ಪನೆ ಕುರಿತಂತೆಯೇ ಇದೆ.

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗ
ಅಯ್ಯ ಮಂಚಿದೆ ಎನೆ ತೆಲುಗ,
ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು
ಮೈಯಲ್ಲಿ ಕೇಳಿರಣ್ಣಾ"

ಎಂಬ ರತ್ನಾಕರ ವರ್ಣಿಯ ಮಾತು ಕಾವ್ಯ ಕುರಿತಂತೆಯೂ ಹಾಗೂ ಸಂವಹನ ಕುರಿತಂತೆಯೂ ಹೇಳುತ್ತದೆ.

ಕವಿಗಳ ನಿಂದನೆಯ ಮಾತುಗಳು ಕವಿ ಸ್ವರೂಪದ ಬಗ್ಗೆಯೇ ತಿಳಿಸುತ್ತದೆ.

"ಸರಸತಿಯನ ಅಬಲೆಯನ ಗೋಣ್ಮುರಿಗೊಂಡು ಅರ್ಥಕ್ಕೆ ಕುದಿದು ನೋಯಿಸುವ ಸರಸ್ವತಿ ದ್ರೋಹರು"

–ರನ್ನ

"ಗುಡಾರದ ಕವಿಯಂತೆ ಮುಚ್ಚಿ ಪೋದ ಕವಿಗಳು"–ರನ್ನ

"ನವರಸಮಂ ಕೆರೆಯ ನುಡಿದನ ಎನಿಸಿದ ಕವಿ ಸತ್ಕವಿಯೆನಿಕ್ಕುಂ"

–ರನ್ನ

"ಪರರ ಕಾವ್ಯಾರ್ಥಗಳನ್ನು ಛಿದ್ರಿಸುವ ಅಕ್ಷರ ದರಿದ್ರರು"

–ಹರಿಹರ

ಮೇಲಿನ ಸಾಲುಗಳು ಕವಿಯಾದವನ ಅಭಿವ್ಯಕ್ತಿ ಸಾಮರ್ಥ್ಯ, ಸ್ವಾತಂತ್ರ್ಯಗಳನ್ನು ಕುರಿತು ಚಿಂತಿಸುವುದನ್ನು ಕಾಣಬಹುದು. ಕಾವ್ಯ ಮೀಮಾಂಸೆಯ ಮುಖ್ಯ ಪ್ರಶ್ನೆಗಳಾದ ಕವಿ ಎಂದರೇನು? ಕೃತಿ ಎಂದರೇನು? ಓದುಗನೆಂದರೆ ಯಾರು? ಎಂಬ ಪ್ರಶ್ನೆಗಳಿಗೆ ಸಿಕ್ಕುವ ಉತ್ತರಗಳು, ಅಭಿಪ್ರಾಯಗಳೇ ಕನ್ನಡ ಕಾವ್ಯ ಮೀಮಾಂಸೆಯ ಸ್ವರೂಪವನ್ನು ನಿರ್ಧರಿಸುತ್ತದೆ.

**ಸಾಹಿತ್ಯ ಚಿಂತನೆ ಮತ್ತು ತತ್ವಜ್ಞಾನ:**

ಇಂಗ್ಲಿಷಿನಲ್ಲಿ ಕಾವ್ಯ ಮೀಮಾಂಸೆ; ಮತ್ತು ಸಾಹಿತ್ಯ ವಿಮರ್ಶೆ; ಸಾಹಿತ್ಯ ವಿಮರ್ಶೆಯ ತತ್ವಗಳು ಬೇರೆ ಬೇರೆ ಹೆಸರಿನಲ್ಲಿ ಕೆಲಸ ಮಾಡುತ್ತಿವೆ. ಕನ್ನಡದಲ್ಲಿ ನಾವು ಸಾಹಿತ್ಯ ಮೀಮಾಂಸೆಯನ್ನು ಸಾಹಿತ್ಯ ತತ್ವದೊಂದಿಗೆ ಸಮೀಕರಿಸಿ ಬಳಸುತ್ತೇವೆ. ಅದು ಪ್ರತ್ಯೇಕ ಜಾತಿಯೆಂಬಂತೆ ಪರಿಗಣಿತವಾಗಿಲ್ಲ. ಚಿಂತನೆಯ ವಿಚಾರಗಳು ಪ್ರತಿಯೊಂದು ಸಂದರ್ಭದಲ್ಲಿಯೂ ತತ್ವಜ್ಞಾನದೊಂದಿಗೆ ಅನುಸಂಧಾನವನ್ನು ನಡೆಸಿದೆ. ಹಾಗೆ ನೋಡುವುದಿದ್ದರೆ ತುಂಬಾ ವಿಶಾಲವಾದ ಅರ್ಥದಲ್ಲಿ ಬರವಣಿಗೆಯ ಎಲ್ಲಾ ವಿಧಾನಗಳು ತತ್ವಜ್ಞಾನದೊಂದಿಗೆ ಅನುಸಂಧಾನ ನಡೆಸುತ್ತಾ ಒಂದು ನಿದಿಷ್ಟ ನಿಲುವನ್ನು ಪ್ರತಿಪಾದಿಸುತ್ತದೆ. ಲೇಖಕರು ಯಾವ

ಜಾಗದಲ್ಲಿ ನಿಂತಿದ್ದಾರೆ ಮತ್ತು ಯಾವುದನ್ನು ಪ್ರತಿಪಾದಿಸುತ್ತಾರೆಂಬುದು ಆಯಾ ಸಂದರ್ಭದ ತಾತ್ವಿಕ ನಿಲುವುಗಳ ದ್ಯೋತಕವಾಗಿರುತ್ತದೆ. ಚಾರಿತ್ರಿಕವಾಗಿ ಪ್ರತಿಯೊಂದು ಚಳುವಳಿಯು ಹುಟ್ಟುವಾಗಲೂ ತನ್ನ ದೃಷ್ಟಿಯಲ್ಲಿ ಸಾಹಿತ್ಯ ಯಾರಿಗೆ? ಯಾಕೆ? ತನ್ನ ದೃಷ್ಟಿಯಲ್ಲಿ ಸಾಹಿತ್ಯವೆಂದರೇನು? ಅಂತ ವ್ಯಾಖ್ಯಾನಿಸುತ್ತದೆ. ಈ ರೀತಿಯ ವ್ಯಾಖ್ಯಾನಗಳು ಆಯಾ ಚಳುವಳಿಗಳಿಗೆ ಬಹಳ ಮಹತ್ವದ್ದು. ಚಳುವಳಿಗಳು ಇವುಗಳನ್ನು ವ್ಯಾಖ್ಯಾನಿಸದೆ ಮುಂದೆ ಹೋಗುವುದಿಲ್ಲ. ಆದುದರಿಂದ ಚಳುವಳಿಗಳ ಮುಖ್ಯ ಸಮಸ್ಯೆಯಿರುವುದು ಅವುಗಳ ವ್ಯಾಖ್ಯೆಯಲ್ಲಿ ಅಲ್ಲ. ಅವು ಪ್ರತಿಪಾದಿಸುವ ತಾತ್ವಿಕತೆಯಲ್ಲಿ.

ವಿಮರ್ಶೆ ಎನ್ನುವುದು ಒಂದು ಆಕಸ್ಮಿಕ ಪ್ರಕ್ರಿಯೆಯಲ್ಲ. ಅದು ಪ್ರತಿಪಾದಿಸುವ ಸಾಮಾಜಿಕ ನಿಲುಗಳು ಕೂಡಾ ವಸಾಹತುಶಾಹಿಯ ಆಡಳಿತಕ್ಕೆ ಒಳಗಾದ ರಾಷ್ಟ್ರಗಳಲ್ಲಿ ಸಾಹಿತ್ಯ ವಿಮರ್ಶೆಯು ಮೊದ ಮೊದಲು ರಾಷ್ಟ್ರೀಯವಾದಿ ಚಿಂತನೆಗಳ ಭಾಗವಾಗಿರುವುದಕ್ಕೂ ಅವುಗಳ ತಾತ್ವಿಕ ದರ್ಶನಕ್ಕೂ ಒಂದು ಸಂಕೀರ್ಣವಾದ ಸಂಬಂಧವಿದೆ. ಇಂಗ್ಲಿಷಿನ ಆಧುನಿಕ ಯುಗದ ವಿಮರ್ಶೆಯ ಪ್ರಕಾರವು ಹುಟ್ಟಿದ್ದಕ್ಕೆ ಕುತೂಹಲಕಾರಿಯಾದ ಚರಿತ್ರೆಯಿದೆ. ಇಂಗ್ಲಿಷನಲ್ಲಿ ಸಾಹಿತ್ಯ ವಿಮರ್ಶೆಯು ಹುಟ್ಟಿದ್ದು ಅಭಿರುಚಿ ನಿರ್ಮಾಣದ ಕಾರಣಕ್ಕೆ ಅದರ ಹಿಂದೆ ಬದಲಾಗುತ್ತಿದ್ದ ಇಂಗ್ಲೆಂಡಿನ ಚರಿತ್ರೆಯಿತ್ತು.[೯]

ಆ ಸಂದರ್ಭದಲ್ಲಿ ಸಾಹಿತ್ಯ ವಿಮರ್ಶೆಯು ರೂಪಗೊಳ್ಳುತ್ತಿದ್ದ ಸಂದರ್ಭಕ್ಕೂ ಸಾಮಾಜಿಕವಾಗಿ ಬದಲಾಗುತ್ತಿದ್ದ ಮೌಲ್ಯಕ್ಕೂ ಸಂಬಂಧವಿತ್ತು. ಭಾರತದಲ್ಲಿಯೂ ವಿಮರ್ಶೆಯು ಹುಟ್ಟಿಕೊಳ್ಳುವಾಗ ವಸಾಹತುಶಾಹಿ ಚರಿತ್ರೆ, ಮಧ್ಯಮ ವರ್ಗದ ಉದಯ; ಬುದ್ಧಿ ಜೀವಿಗಳು ಪಡೆದುಕೊಂಡ ಶಿಕ್ಷಣ, ರಾಷ್ಟ್ರೀಯತೆ ಆಂದೋಲನಗಳಿದ್ದವು. ಅದರೊಂದಿಗೆ ಪಶ್ಚಿಮ ಕೇಂದ್ರಿತ ಶಿಕ್ಷಣ ಪದ್ಧತಿಯು ಕಲಿಸಿಕೊಟ್ಟ ಹೊಸದೊಂದು ಪರಿಭಾಷೆಯೂ ಸೇರಿಕೊಂಡಿತು. ಅದೆಂದರೆ ವಸ್ತುನಿಷ್ಠತೆ. ಈ ಮಾತುಗಳನ್ನು ಹೇಳಲು ಕಾರಣವಿಷ್ಟೆ. ಪ್ರತಿಯೊಂದು ಸಾಹಿತ್ಯ ಪಂಥವು ತನ್ನ ಸಾಹಿತ್ಯ ಬರವಣಿಗೆಗಳಲ್ಲಿ ಒಂದಲ್ಲ ಒಂದು ರೀತಿಯ ತತ್ವಜ್ಞಾನದ ನಿಲುಗಳನ್ನು ವ್ಯಕ್ತಪಡಿಸುತ್ತದೆ.

### ಸಾಹಿತ್ಯ ಚಿಂತನೆಯ ತತ್ವಗಳು:

ಆಧುನಿಕತೆಯ ಉಗಮವನ್ನು ಈ ಶತಮಾನದ ರಚನೆಗಳ ಮುಖಾಂತರ ಕಂಡುಕೊಳ್ಳಬಹುದು ಈ ಆಧುನಿಕ ಮನೋಧರ್ಮವನ್ನು ಮುಖ್ಯವಾಗಿ ಭಾಷೆ ಮತ್ತು ವ್ಯಕ್ತಿತ್ವಗಳನ್ನು ಕುರಿತ ಬದಲಾದ ಧೋರಣೆಗಳನ್ನು ಗುರುತಿಸಬಹುದು. ಹಳಗನ್ನಡದ ಕೃತಿಗಳಲ್ಲಿ 'ವ್ಯಕ್ತಿತ್ವ'ಕ್ಕಿಂತ ಮನುಷ್ಯ ಸ್ವಭಾವದ ಅನಾವರಣ ಮುಖ್ಯವಾಗಿರುವುದು ಕಂಡು ಬರುತ್ತದೆ. ಪಂಪ, ರನ್ನ ಮುಂತಾದ ಕವಿಗಳು ಚಿತ್ರಿಸಿರುವ ಪಾತ್ರಗಳು ಮನುಷ್ಯ ಸ್ವಭಾವದ ಬೇರೆ ಬೇರೆ ಮುಖಗಳ ಅಥವಾ ಬದುಕಿನ ಬೇರೆ ಬೇರೆ ಮೌಲ್ಯಗಳ ಮೂರ್ತಿಗಳಂತೆ ಕಂಡುಬರುತ್ತಾರೆ. 'ಚಲದೊಳ್ ದುರ್ಯೋಧನನಂ' ಎಂದು ಆರಂಭವಾಗುವ ಪಂಪನ ಪದ್ಯ ಇಂಥ ಧೋರಣೆಯನ್ನು ವ್ಯಕ್ತಪಡಿಸುತ್ತವೆ.

ಇನ್ನು ಅನುಭಾವಿಕ ವಚನಗಳಲ್ಲಿ ಮೊದಲ ಬಾರಿಗೆ ಮನುಷ್ಯ ಸಾಮಾನ್ಯ ಅನುಭವಗಳಿಗಿಂತ ವ್ಯಕ್ತಿಯೊಬ್ಬನ ಅನುಭವದ ಪ್ರಾಮಾಣಿಕತೆಗೆ ಪ್ರಾಮುಖ್ಯ ಸಿಗತೊಡಗಿತು. ಹೀಗಾಗುವುದಕ್ಕೆ ಆ ಶತಮಾನದ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು ಕಾರಣವಾಗಿರಬಹುದು. ೧೨ನೇ ಶತಮಾನದಲ್ಲಿ ಸಮಾಜದ ವಿವಿಧ ವರ್ಗಗಳ ಜನರು ಭಕ್ತಿಯ ಮುಖಾಂತರ ಹೊಸ ಬಗೆಯ ಸಮುದಾಯವನ್ನು ಸೃಷ್ಟಿಸಿಕೊಂರು ತಮ್ಮ ತಮ್ಮ ಬದುಕಿನ ಹಿನ್ನೆಲೆಯಲ್ಲಿ ಅವರು ಅನೇಕ ಹೊಸ ಪ್ರಶ್ನೆಗಳನ್ನು ಮಂಡಿಸಿದ್ದು ಕಾಣಿಸುತ್ತದೆ. ಧರ್ಮದ ವಿಚಾರ ಕೂಡಾ ವೈಯಕ್ತಿಕ ಅನುಭವದ ಪ್ರಮಾಣದ ನೆಲೆಯಿಂದ ಪ್ರಶ್ನೆಗೊಳಪಡುವ ಮಥನಗೊಳ್ಳುವ ಪರಿಯನ್ನು ಈ ಶತಮಾನದಲ್ಲಿ ಗುರುತಿಸಬಹುದು.

ವ್ಯಕ್ತಿತ್ವದ ಹೊಸ ಕಲ್ಪನೆ, ಭಾಷೆಯ ಬಗ್ಗೆ ಬದಲಾದ ಧೋರಣೆ ಮತ್ತು ಹೊಸದಾಗಿ ಹುಟ್ಟಿದ ವೈಚಾರಿಕತೆಯ ಪರಿಣಾಮವಾಗಿ ಕಾವ್ಯ ಚಿಂತನೆಯಲ್ಲೂ ಮಹತ್ವದ ಬದಲಾವಣೆ ಸಂಬಂಧಿಸಿದ್ದನ್ನು ಗುರುತಿಸಲು ಸಾಧ್ಯವಿದೆ. ಈ ಪಲ್ಲಟಗಳನ್ನು ಕವಿ, ಕೃತಿ, ಓದುಗ ಸಂಬಂಧ ಭಾಷೆಯ ಬಗ್ಗೆ ನಡೆಸಿದ ಚಿಂತನೆ, ಅರ್ಥ ಸ್ವರೂಪದ ಬಗ್ಗೆ ನಡೆಸಿದ ಚರ್ಚೆ ಕಂಡುಬರುತ್ತದೆ.

ಮನುಷ್ಯನ ಚಿಂತನೆಗಳ ಹಿನ್ನೆಲೆಯಲ್ಲಿ ನಿರ್ದಿಷ್ಟವಾದ ತಾತ್ವಿಕ ನಿಲುವುಗಳನ್ನು ಗುರುತಿಸಬಹುದು. ಸರಳಗೊಳಿಸಿ ಹೇಳುವುದಾದರೆ ತಾತ್ವಿಕ ನಿಲುವು ಎಂಬುದು ಲೋಕದೃಷ್ಟಿಯೇ ಆಗಿರುತ್ತದೆ. ಈ ಲೋಕದೃಷ್ಟಿಗೆ ಅನುಗುಣವಾಗಿ ಚಿಂತನೆಗಳ ವೈವಿಧ್ಯಗಳು ಉಂಟಾಗುತ್ತವೆ. ಆದರೆ ವೈವಿಧ್ಯಮಯ ಚಿಂತನೆಗಳ ಬೆನ್ನೆಲುಬಾಗಿರುವ ತಾತ್ವಿಕ ವಿಲುವುಗಳು ಮಾತ್ರ ಪರಿಮಿತವಾಗಿರುತ್ತದೆ. ಲೋಕದೃಷ್ಟಿಯನ್ನು ಕುರಿತ ಪ್ರಮುಖ ನಿಲುವುಗಳನ್ನು ಹೀಗೆ ಗುರುತಿಸಲಾಗಿದೆ. ವ್ಯಕ್ತಿಗೆ ಮಾತ್ರ ಸತ್ಯತ್ವವುಂಟೆಂದೂ, ವಸ್ತುವಿಗೆ ಸತ್ಯತ್ವವಿಲ್ಲವೆಂದೂ ಒಂದು ನಿಲುವು. ವಸ್ತುವಿಗೆ ಸತ್ಯತ್ವವುಂಟು ವ್ಯಕ್ತಿ ಇಲ್ಲದೆಯೂ ವಸ್ತು ಇರಬಲ್ಲದು ಎರಡನೆಯ ನಿಲುವು. ವ್ಯಕ್ತಿ ಮತ್ತು ವಸ್ತುಗಳೆರಡಕ್ಕೂ, ಸತ್ಯತ್ವವುಂಟೆಂಬುದು ಮೂರನೆಯ ನಿಲುವು. ವ್ಯಕ್ತಿ ಕುರಿತೂ ಅಷ್ಟೆ ಅಲ್ಲದೆ ವ್ಯಕ್ತಿ-ವಸ್ತು ಎರಡೂ ಭಿನ್ನ, ಭಿನ್ನವಲ್ಲವೆಂಬಂತೆ ಕಂಡರೂ ಐಕ್ಯವನ್ನು ಸಾಧಿಸಬಹುದು. ಎಂಬ ನಿಲುವುಗಳಿವೆ. ಸಾಮಾನ್ಯ ಮನುಷ್ಯನ ಮನಸ್ಸು ಇವುಗಳಲ್ಲಿ ಯಾವುದಾರೊಂದು ನಿಲುವಿನ ಶಾಶ್ವತವಾಗಿ ಪರಿಗಣಿಸುವುದು ಕಷ್ಟವೆಂದು ತೋರುತ್ತದೆ. ಈ ಸೀಮಿತ ಸಂಖ್ಯೆಯ ನಿಲುವುಗಳ ಮಿಶ್ರಣ ಚಿಂತನೆಗಳ ವೈವಿಧ್ಯಮಯ ರೂಪಗಳಿಗೆ ಕಾರಣವಾಗಿದೆ.

ಕಾವ್ಯ ಮೀಮಾಂಸೆಯನ್ನು ಕುರಿತ ವಿವೇಚಿಸುವಾಗ ಆಯಾ ಕಾವ್ಯ ಮೀಮಾಂಸೆ ಪಡೆದ ರೂಪಕ್ಕೆ ಕಾರಣವಾಗಿರುವ ತಾತ್ವಿಕ ನಿಲುವನ್ನು ಗುರುತಿಸವುದು ಅಗತ್ಯವಾಗುತ್ತದೆ. ಮುಖ್ಯವಾಗಿ ಎರಡು ಬಗೆಯ ಕಾವ್ಯ ಮೀಮಾಂಸೆಯನ್ನು ಗುರುತಿಸಬಹುದು. ವ್ಯಕ್ತಿ ಮತ್ತು ವಸ್ತುಗಳು ಭಿನ್ನವೆಂದು ತಿಳಿಯುವ ನಿಲುವಿನ ಕಾವ್ಯ ಮೀಮಾಂಸೆಯು ಕಾವ್ಯವನ್ನು ಒಂದು ವಸ್ತುವೆಂದು ಪರಿಗಣಿಸುತ್ತದೆ. ಕವಿ, ಕೃತಿ, ಓದುಗ ಇವು ಪ್ರತ್ಯೇಕ ಅಸ್ತಿತ್ವವುಳ್ಳ ಘಟಕಗಳು ಮತ್ತು ಈ ಒಂದೊಂದು ಘಟಕವನ್ನೂ ವಸ್ತುನಿಷ್ಠವಾಗಿ ಅಧ್ಯಯನಕ್ಕೆ ಒಳಪಡಿಸಬಹುದೆಂದು ಈ ದೃಷ್ಟಿಯ ತಿಳುವಳಿಕೆ.

ಇದಕ್ಕೆ ಪ್ರತಿಯಾಗಿ ವ್ಯಕ್ತಿ ಮತ್ತು ವಸ್ತುಗಳ ನಡುವೆ ಐಕ್ಯವನ್ನು ಸಾಧಿಸಬಹುದು ಎಂಬ ನಿಲುವು ಕಾವ್ಯವನ್ನು ಒಂದು ಪ್ರಕ್ರಿಯೆಯಾಗಿ ಕಾಣುತ್ತದೆ. ಹೀಗೆ ನೋಡಿದಾಗ ಕವಿ, ಕೃತಿ, ಓದುಗ ಇವೆಲ್ಲ ಭಿನ್ನವೆಂಬಂತೆ ತೋರಿದರೂ ಒಂದೇ ಪ್ರಕ್ರಿಯೆಯ ಅಂಶಗಳು ಎಂಬಂತೆ ಕಾಣತೊಡಗುತ್ತದೆ. ಕಾವ್ಯವನ್ನು ಅನುಕರಣೆ, ಲೋಕದ ಪ್ರತಿಬಿಂಬ ಎಂದೆಲ್ಲ ವರ್ಣಿಸುವುದು ಮೊದಲನೆ ಬಗೆಯ ಕಾವ್ಯ ಮೀಮಾಂಸೆಯಲ್ಲಿ ಕಂಡರೆ, ಎರಡನೆ ಬಗೆಯ ಕಾವ್ಯ ಮೀಮಾಂಸೆಯಲ್ಲಿ ಇಡೀ ಕಾವ್ಯ ಪ್ರಕ್ರಿಯೆಯನ್ನು ಸ್ವಯಂ ತೇಜಸ್ಸುಳ್ಳ ಒಂದು ಸೃಷ್ಟಿ ಎಂದು ಪರಿಗಣಿಸಿರುವುದು ಕಾಣುತ್ತದೆ. ಎಂ.ಎಚ್. ಅಬ್ರಾಂಸ್ ಎಂಬ ಚಿಂತಕ ಕಾವ್ಯ ಮೀಮಾಂಸೆಯ ಈ ಭಿನ್ನತೆಯನ್ನು ಕನ್ನಡಿ ಮತ್ತು ದೀಪ ಎಂಬ ರೂಪಕಗಳ ಮುಖಾಂತರ ವಿವರಿಸುತ್ತಾನೆ.

ವಚನಗಳಲ್ಲಿ ಮೊದಲ ಬಾರಿಗೆ ವ್ಯಕ್ತಿಯ ಅಂತರಂಗದ ಬದುಕಿಗೆ ಪ್ರಾಮುಖ್ಯ ಸಿಗತೊಡಗಿದಾಗ ವಾಗ್ರಚನೆಗಳನ್ನು ಕುರಿತ ದೃಷ್ಟಿಯೂ ಬದಲಾಗಿದ್ದು ಕಂಡು ಬರುತ್ತದೆ. ವಚನ, ಮಾತು, ಭಾಷಿಕ ರಚನೆ ಇವೆಲ್ಲವುಗಳನ್ನು ಕುರಿತ ಚಿಂತನೆಯ ಹಿಂದೆ ವಚನಕಾರರು ಒಪ್ಪಿದ ತಾತ್ವಿಕ ಧೋರಣೆಯ ಪ್ರಭಾವ ಗುರುತಿಸಬಹುದು. ವ್ಯಕ್ತಿ ಮತ್ತು ವಸ್ತುಗಳ ಐಕ್ಯವನ್ನು ಒಪ್ಪುವ ಅದ್ವೈತದ ಒಂದು ಬಗೆಯಾದ ಶಕ್ತಿ ವಿಶಿಷ್ಟ ದ್ವೈತದ ನಿಲುವುಗಳು ಭಾಷಿಕ ರಚನೆಯನ್ನು ಕುರಿತ ಧೋರಣೆಯನ್ನು ರೂಪಿಸಿರುವುದನ್ನು ನೋಡಬಹುದು.

ಅದೇ ರೀತಿ ಮುಂದುವರೆದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೊಸಗನ್ನಡ ಅಥವಾ ಆಧುನಿಕ ಕನ್ನಡ ಸಾಹಿತ್ಯದ ಕಳೆದ ಎಂಟು ದಶಕಗಳ ಕಾಲಮಾನವು ಅತ್ಯಂತ ಚಲಶೀಲವೂ, ವೈವಿಧ್ಯಮಯವೂ ಆದ ಒಂದು ಸಾಹಿತ್ಯ ಸಂದರ್ಭವಾಗಿದೆ. ಸುಮಾರು ಒಂದು ಸಾವಿರ ವರ್ಷಗಳಷ್ಟು ಪಡೆದುಕೊಂಡ ಕೆಲವೆ ತಿರುವುಗಳಿಗೆ ಹಾಗೂ ಅದರ ಮಂದಗತಿಗೆ ಹೋಲಿಸಿದರೆ ಆಧುನಿಕ ಕನ್ನಡ ಸಾಹಿತ್ಯ ವೇಗ ಮತ್ತು ಅದಕ್ಕೆ ಕಾರಣವಾದ ಸಾಹಿತ್ಯ ಚಳುವಳಿಗಳ ಸ್ವರೂಪವು ಬೆರಗು ಹುಟ್ಟಿಸುವಂಥದಾಗಿದೆ.

"ನವೋದಯದವರು" ಸಾಮಾಜಿಕ ಮತ್ತು ಧಾರ್ಮಿಕ ಜಡಾವಸ್ಥೆಗಳಿಗೆ ಪ್ರತಿರೋಧದ ನಿಲುವು ವ್ಯಕ್ತಪಡಿಸಿರುವುದು ಕಾಣಬಹುದು. ಸ್ವಾತಂತ್ರ್ಯದ ಪರಿಕಲ್ಪನೆಯನ್ನು ನವೋದಯದಲ್ಲಿ ಹೆಚ್ಚು ಕಾಣುತ್ತವೆ. ಸಂಸ್ಕೃತ ವಚನಗಳು ಇವರುಗಳ ಹಾದಿಯಲ್ಲೆ ಹೋಗಿವೆ. ತಮ್ಮದೇ ಆದ ಒಂದು ದೃಷ್ಟಿಕೋನದ ಹಿನ್ನೆಲೆಯಲ್ಲಿ ಸಾಹಿತ್ಯ ರಚಿಸಿರುವುದು ಕಾಣಬಹುದು. ಇಹಪರದ ಕಲ್ಪನೆ, ರಾಷ್ಟ್ರೀಯತೆ ವೈಜ್ಞಾನಿಕ ವಿಚಾರಗಳು ಹೇಳುವುದು ಇವರ ಪ್ರಮುಖ ತತ್ವವಾಗಿದೆ ಎಂದು ಹೇಳಬಹುದು. ಇದಕ್ಕೆ ಉದಾಹರಣೆ ಕುವೆಂಪು, ಕಾರಂತ, ಬೇಂದ್ರೆ, ಮಾಸ್ತಿ ಬರೆದ ಕವಿತೆಗಳು ಸಾಕ್ಷಿಯಾಗಿವೆ. ಆದರೆ ಒಟ್ಟು ನವೋದಯದ ಸನ್ನಿವೇಶದಲ್ಲಿಯೇ ಒಂದು ಕಡೆ ಭಾಷೆಯನ್ನು ಭಾವನೆಗಳ, ವಿಚಾರಗಳ 'ವಾಹಕ'ವಾಗಿ ಬಳಸಬೇಕೆಂಬ ತುಡಿತ, ಮತ್ತೊಂದು ಕಡೆ ಭಾಷೆಯ ಮೂಲಕ ಅನುಭವಗಳ ಪುನರ್ ನಿರ್ಮಾಣ ಮಾಡಿ ಅದನ್ನು ಭಾವನೆಗಳ, ವಿಚಾರಗಳ ಪ್ರೇರಕವಾಗಿ ಬಳಸಬೇಕೆಂಬ ತುಡಿತ ಇರುವಂತೆ ಕಾಣುತ್ತದೆ.

ಪ್ರಗತಿಶೀಲದವರು ಸ್ವಾತಂತ್ರ್ಯ ಆಕಾಂಕ್ಷೆ ಶೋಷಿತ ವರ್ಗಕ್ಕೆ ಸಹಾನುಭೂತಿ ಸಮತವಾದ

ನಿರ್ಭಯ, ವಿಮರ್ಶೆ, ದಬ್ಬಾಳಿಕೆ, ದಾಸ್ಯ, ಬಂಧನ, ಮೋಸ, ಕುತಂತ್ರ, ಹಸಿವು ಇವು ಯಾವುದೇ ರೂಪದಲ್ಲಿದ್ದರೂ ವಿರೋಧಿಸಬೇಕು. ದೀನ ದುರ್ಬಲರಿಗಾಗಿ ಕಾಯಬೇಕು ಎಂಬ ನಿಲುವು ಹೊಂದಿ ಸರಳವಾದ ಭಾಷೆಯಲ್ಲಿ ಹಸಿ-ಹಸಿ ಸಮಾಜ ವ್ಯವಸ್ಥೆಯನ್ನು ಕಥೆ, ಕಾದಂಬರಿಯಲ್ಲಿ ತೋರಿಸಲು ಹೊರಟರು. ಹೆಸರಿಗೆ ಅನುಗುಣವಾಗಿ ಪ್ರಗತಿಯನ್ನು ಬಯಸಿದ ಈ ಪಂಥ ಸಾಹಿತ್ಯ ಎನ್ನುವುದು ವಾಸ್ತವಿಕತೆಗೆ ಮುಸುಕನ್ನು ಹಾಕಬಾರದು. ಅದು ಸಾಮಾಜಿಕ ಕ್ರಾಂತಿಯ ವಜ್ರಾಯುಧವಾಗಬೇಕು ಎಂಬ ಧೋರಣೆಯೊಂದಿಗೆ ಸಾಹಿತ್ಯವನ್ನು ರಚಿಸಿದರು. ಪ್ರಮುಖವಾಗಿ ನಿರಂಜನ, ಅನಕೃ, ತರಾಸು, ಬಸವರಾಜ ಕಟ್ಟಿಮನಿಯವರ ಸಾಹಿತ್ಯವನ್ನು ನೋಡಬಹುದು.

ನವ್ಯ ಸಾಹಿತ್ಯ ಚಿಂತನೆಯು ಪ್ರಮುಖವಾಗಿ ಪ್ರಗತಿಶೀಲ ಸಾಹಿತ್ಯವನ್ನು ತಿರಸ್ಕರಿಸಿರುವುದು ಕಂಡುಬರುತ್ತದೆ. ವಿಶಿಷ್ಟ ಸಂವೇದನೆ, ವಿಶಿಷ್ಟವಾದ ಜೀವನ ಧೋರಣೆ, ವಿಶಿಷ್ಟ ರೂಪಗಳು, ವಿಶಿಷ್ಟ ಸೃಷ್ಟಿ ಪ್ರಕ್ರಿಯೆ ಇಲ್ಲಿಯ ಪ್ರಮುಖ ಧೋರಣೆ ಮಾನವ ಕೇಂದ್ರವುಳ್ಳ (Humanist) ಧೋರಣೆಯಾಗಿ ರೂಪಗೊಳ್ಳಬೇಕೆಂದೂ ಬರೆದರು.[10] ಆ ಒಂದು ತಾತ್ವಿಕತೆ ಇಟ್ಟುಕೊಂಡು ಸಾಹಿತ್ಯ ರಚಿಸಿದರು. ಇಲ್ಲಿ ಜೀವನವನ್ನು ಗಂಭೀರವಾಗಿಯೇ ನೋಡಿದರು. ವಿಡಂಬನೆಯೇ ಮುಖ್ಯ ಧೋರಣೆಯಾಯಿತು. ಅನುಭವಗಳ ನಿಜ ಸ್ವರೂಪ ಏನೆಂದು ಹುಡುಕಾಡಿ ಆ ಹುಡುಕಾಟವನ್ನೆ ಕಾವ್ಯವನ್ನಾಗಿ ಮಾಡುವ ಇನ್ನೊಂದು ಬಗೆಯ ಹೊಸ ಪ್ರಜ್ಞೆ ನವ್ಯದಲ್ಲಿ ಮೂಡಿತು.

ಬಂಡಾಯ ಸಾಹಿತ್ಯ ಚಿಂತನೆಯ ತತ್ವವು ಪ್ರಮುಖವಾಗಿ ಮೂಲಭೂತ ಬದಲಾವಣೆಗೆ, ಕ್ರಾಂತಿಕಾರ ಪರಿವರ್ತನೆಗೆ ಸಂಬಂಧಿಸಿದ್ದಾಗಿದೆ. ಸಾಮಾಜಿಕ ಸಂಬಂಧಗಳ ಹಿಂದಿರುವ ಮೋಸಗಳನ್ನು ಅಮಾನವೀಯತೆಗಳನ್ನು ಗುರುತಿಸಿ, ಸಮಾಜ ವ್ಯವಸ್ಥೆಯ ವಿರುದ್ಧ ಸ್ಫೋಟಿಸುತ್ತಾನೆ. ಈ ಸ್ಫೋಟನೆಯ ಆಳದಲ್ಲಿ ಹೊಸ ಸಮಾಜದ ರಚನೆಯ ಕಳಕಳಿ ಅಸ್ತಿತ್ವದಲ್ಲಿರುವ ಸಮಾಜ ಕುರಿತು ಉಗ್ರವಾದ ಅಸಹನೆ, ಒಂದರೊಡನೊಂದು ಬೆಸೆದುಕೊಂಡಿರುತ್ತವೆ. ಹೀಗೆ ಅಸಮಾನತೆ, ಅನ್ಯಾಯ, ಶೋಷಣೆಗಳನ್ನು ಮೂಲಧನ ಮಾಡಿಕೊಂಡು ಯುಗ-ಯುಗಗಳಿಂದ ಬಡವರನ್ನು ಮತ್ತು ಜಾತಿಯ ದೃಷ್ಟಿಯಿಂದ ಹೀನರಾದವರನ್ನು ತುಳಿಯುತ್ತಾ ಬಂದ ಯಜಮಾನ ಸಂಸ್ಕೃತಿಯನ್ನು ಅವರ ವಿರುದ್ಧ ಬಂಡೇಳುವ ಕೆಚ್ಚು ಮತ್ತು ಅಂಥ ಪ್ರತಿಭಟನೆಯ ಹಿಂದಿರುವ ಪ್ರಾಮಾಣಿಕತೆಯೇ ಬಂಡಾಯ ಸಾಹಿತ್ಯದ ಮೂಲ ನೆಲಯಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ನವೋದಯದಲ್ಲಿ ಸಮಾಜವೆಂದರೆ ಅದು ಔನ್ನತ್ಯ ಮೌಲ್ಯಗಳ ಕ್ರೋಢಿಕರಣ. ಮನುಷ್ಯ ಸಮಾಜವು ಬೇರೆ ಬೇರೆ ಆದರ್ಶ ಮೌಲ್ಯಗಳನ್ನು ಆತು ಕೊಂಡಿರುವುದರಿಂದ ಮನುಷ್ಯನಿಗೆ ಸಂಸ್ಕಾರ, ಸಂಸ್ಕೃತಿಯು ಇರುವುದರಿಂದ ಪ್ರಾಣಿಗಿಂತ ಬೇರೆಯಾಗಿದ್ದಾನೆ ಎಂಬ ನಿಲುವು ನವೋದಯದ್ದು. ಸೂಕ್ಷ್ಮವಾಗಿ ಗಮನಿಸಿದರೆ ಇದರಲ್ಲಿ ನಾಗರೀಕ ಪ್ರಭುತ್ವದ ಅಂಶವು ಸೇರಿಕೊಂಡಿದೆ.

ಇದುವರೆಗಿನ ಚರ್ಚೆಯನ್ನು ಹೀಗೆ ಸಂಗ್ರಹಿಸಬಹುದು

೧. ಕಾವ್ಯಾಂತರ್ಗತ ಕಾವ್ಯ ಚರ್ಚೆ ಕನ್ನಡ ಕಾವ್ಯ ಪರಂಪರೆಯಲ್ಲಿ ಬೆಳೆದು ಬಂದಿತು. ಕಾವ್ಯದ ಭಾಗವಾಗಿಯೇ ಕವಿ-ಕಾವ್ಯ ಚರ್ಚೆ ಸತ್ಕವಿ ಪ್ರಶಂಸೆ, ಕುಕವಿ ನಿಂದನೆಗಳನ್ನು ಕಾಣಬಹುದು.

೨. ಕನ್ನಡ ಕಾವ್ಯಗಳಲ್ಲಿ ಕಂಡುಬರುವ ಪೂರ್ವಕವಿಗಳ ಸ್ಮರಣೆ ಹಾಗೂ ಸ್ವಕಾವ್ಯದ ಪ್ರಶಂಸೆಗಳು ಕವಿಗಿರಬೇಕಾದ ಗುಣಗಳನ್ನು ಕವಿಯ ಕುರಿತು ಅಭಿಪ್ರಾಯಗಳನ್ನು ಕಾವ್ಯ ಲಕ್ಷಣಗಳನ್ನು ತಿಳಿಸುತ್ತವೆ. ಸ್ವಕಾವ್ಯ ಪ್ರಶಂಸೆಯು ಕೃತಿಯ ಅನನ್ಯತೆಯನ್ನು, ಕಾವ್ಯ ಲಕ್ಷಣಗಳನ್ನು ತಿಳಿಸುತ್ತವೆ. ಸ್ವಕಾವ್ಯ ಪ್ರಶಂಸೆಯು ಕೃತಿಯ ಅನನ್ಯತೆಯನ್ನು, ಕವಿಯ ವ್ಯಕ್ತಿ ವಿಶಿಷ್ಟಾಭಿವ್ಯಕ್ತಿಯನ್ನು ಸಾಧಿಸುವ ಅಪೇಕ್ಷೆಯನ್ನು ತಿಳಿಸುತ್ತದೆ.

೩. ಕಾವ್ಯ ಎಲ್ಲ ಕವಿಗಳಿಗೂ ಸಮಾನವಾದ ಭಾಷಾ ಸಾಮಗ್ರಿಯಿಂಲೇ ಮೂಡಿದರೂ, ಕವಿಯ ವಿಷಕ್ಷಣತೆ ಪ್ರತಿಭೆಯಿಂದಾಗಿ ಭಿನ್ನವಾಗುತ್ತದೆ ಎಂಬ ವಿಚಾರಗಳನ್ನು ಸರಸ್ವತಿ ಕುರಿತ ವಿಚಾರಗಳನ್ನು ಗಮನಿಸಬಹುದು.

೪. ಕಾವ್ಯ ಎಂಬುದು ವಾಸ್ತವವಾಗಿ ನಾಟಕ ಅಥವಾ ದೃಶ್ಯಕಾವ್ಯ ಎಂಬುದೊಂದು ಅಭಿಪ್ರಾಯವೂ ಇದೆ. ಮೊದಲ ಬಾರಿಗೆ ಜನಾಂತರ ದೃಷ್ಟಿ ಎಂಬ ಪದ ಬಳಕೆಗೆ ಬಂದಿದ್ದು, ಕವಿಯ ದೃಷ್ಟಿಗೆ ಆದ್ಯತೆ ನೀಡಲಾಗಿದೆ.

೫. ಕಾವ್ಯ ಸತ್ಯ ಎಂಬ ವಿಚಾರದ ಹಿನ್ನೆಲೆಯಲ್ಲಿ ಕವಿಯ ಅಭಿವ್ಯಕ್ತ ಸ್ವಾತಂತ್ರ್ಯ ಕುರಿತು ಓದುಗನ ದೃಷ್ಟಿಕೋನಗಳನ್ನು ಕುರಿತು ಪರಿಚಯಿಸುತ್ತಾರೆ.

೬. ವಸ್ತುಕ, ವರ್ಣಕಗಳೆಂಬ ಕಾವ್ಯ ಪ್ರಭೇದಗಳು ಕನ್ನಡಿಗರ ಕೊಡುಗೆಯಾಗಿದ್ದು ಕನ್ನಡ ಕಾವ್ಯ ಪರಂಪರೆಯಲ್ಲಿ ಬೆಳೆದು ಬಂದಿರುವ ಎರಡು ರೀತಿಯ ಕಾವ್ಯ ಪರಂಪರೆಯನ್ನೇ ತಿಳಿಸುತ್ತವೆ. ಇವುಗಳ ಲಕ್ಷಣ ಕಾಲಕಾಲಕ್ಕೆ ಬೇರೆಯಾಗುತ್ತಾ ಸಾಗಿದರೂ ಅವುಗಳ ವೈಶಿಷ್ಟ್ಯವನ್ನು ಅರೆಯಬಹುದು.

೭. ಕಾವ್ಯದ ವಸ್ತುವು ಕೂಡಾ ಕವಿಯ ಸ್ವರೂಪವನ್ನು ನಿರ್ಧರಿಸುತ್ತದೆ. ಕಾವ್ಯ ವಸ್ತುವಿನಲ್ಲಿ ಉಂಟಾದ ಬದಲಾವಣೆ, ಅವುಗಳ ನಿರ್ವಹಣೆಯಲ್ಲಿ ತೋರಿದ ಸ್ವಾತಂತ್ರ್ಯ ಕವಿಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೇ ಸೂಚಿಸುತ್ತದೆ. ಕವಿ ಕೇಂದ್ರೀತ ನಿಲುವಿಗೆ ಪೂರಕವಾಗಿದೆ.

೮. ಕನ್ನಡದ ಪರಂಪರೆಯಲ್ಲಿ ಮೂಡಿದ ಶೈಲಿಯ ಚರ್ಚೆ ಕಾವ್ಯ ಸ್ವರೂಪವನ್ನು ನಿರ್ಧರಿಸುತ್ತ ಕನ್ನಡ ಕಾವ್ಯ ಪರಂಪರೆಯಲ್ಲಿ ಹಾದು ಬಂದಿರುವ ಎರಡು ರೀತಿಯ ಕಾವ್ಯಧಾರೆಗಳ ಲಕ್ಷಣಗಳನ್ನು ತಿಳಿಸುತ್ತದೆ.

೯. ಕಾವ್ಯಾನುಭವ, ಕಾವ್ಯ ಪ್ರಯೋಜನ ಕುರಿತು ಹೇಳುವಾಗ ಸಹೃದಯ ಅಥವಾ ಓದುಗರ ಸ್ವರೂಪ ಕುರಿತು ಚರ್ಚಿಸಲಾಗುತ್ತದೆ. ನಿರ್ದಿಷ್ಟ ಸಹೃದಯ ಸಮೂಹ ಕಾವ್ಯ ಪ್ರಕಾರವನ್ನೆ ನಿರ್ಧರಿಸುವಂಥದ್ದು ಕಾಣಬಹುದು. ಮಾರ್ಗ, ದೇಸೀ

ಪರಿಕಲ್ಪನೆಗಳು ಈ ಸಹೃದಯ ವೃಂದದ ಮೆಚ್ಚುಗೆ, ಒಡನಾಟಗಳಿಂದಲೇ ಬೆಳೆದುದನ್ನು ಗಮನಿಸಬೇಕು. ಕನ್ನಡ ಸಾಹಿತ್ಯದ ರೂಪ, ರೀತಿ, ಧೋರಣೆಗಳನ್ನು ಸಹ ಈ ಸಹೃದಯ ವರ್ಗಗಳು ನಿರ್ಧರಿಸುವುದನ್ನು ನೋಡಬಹುದು.

೧೦. ಕಾವ್ಯ ಪ್ರಯೋಜನ ಕುರಿತಂತ ವಿಚಾರಗಳು ಕುಕವಿ, ಸತ್ಕವಿ, ಅಕಾವ್ಯ ಕುರಿತಂತ ವಿಚಾರಗಳೆಲ್ಲ ಕನ್ನಡ ಕಾವ್ಯ ಕಲ್ಪನೆಗಳಿಗೆ ಒಂದು ಚೌಕಟ್ಟನ್ನು ಹಾಕಿಕೊಡುತ್ತವೆ.

೧೧. ಹಾಗೆಯೇ ಕನ್ನಡ ಸಾಹಿತ್ಯ ಚಿಂತನೆಯ ತಾತ್ವಿಕತೆಯು ನವ್ಯ ಸಾಹಿತ್ಯದಲ್ಲಿ ಸಮಾಜವು ವ್ಯಕ್ತಿಯ ಅನನ್ಯತೆಯ ಮಟ್ಟಕ್ಕೆ ನಿಲ್ಲುವಂಥದ್ದು

೧೨. ಪ್ರಗತಶೀಲ ಸಾಹಿತ್ಯದಲ್ಲಿ ಸಮಾಜಾಭಿಮುಖಿಯಾಗಿರುವಾಗ ಅದು ವ್ಯಕ್ತಿ ಮತ್ತು ಆದರ್ಶವಾದ ಮಟ್ಟಕ್ಕಿಂತ ಬೇರೆಯಾದುದು. ಸಾಮಾಜಿಕ ಜೀವನವು ಪ್ರಗತಿಶೀಲರಿಗೆ ತುಂಬಾ ಸುಂದರವಾದುದಲ್ಲ ಎಂದು ಕಂಡುಬರುತ್ತದೆ

೧೩. ಬಂಡಾಯ ಸಾಹಿತ್ಯದಲ್ಲಿ ಶತಶತಮಾನಗಳ ಕಾಲ ಮೇಲಿನ ಎಲ್ಲ ಸ್ತರಗಳವರಿಂದ ಶೋಷಣೆ ಮತ್ತು ಅವಮಾನಗಳಿಗೆ ಸಿಟ್ಟುಗಳಿಗೆ ಸಾಹಿತ್ಯ ಹೊಸ ಬಗೆಯಲ್ಲಿ ಸೃಷ್ಟಿಸಿದರು. ಸಮಾನತೆ, ಯಜಮಾನ, ಸಂಸ್ಕೃತಿ ವಿರುದ್ಧ ಹೋರಾಟ ಈ ಅಂಶಗಳು ಕಂಡುಬರುತ್ತವೆ.

## ಅಡಿ ಟಿಪ್ಪಣಿಗಳು

| | |
|---|---|
| ೧. ಜಿ.ಎಸ್. ಶಿವರುದ್ರಪ್ಪ: ಕನ್ನಡ ಕಾವ್ಯ ಕಲ್ಪನೆ | ಪುಟ–೧೬ |
| ೨. ಅದೇ, | ಪುಟ–೧೭ |
| ೩. ಅದೇ, | ಪುಟ–೧೯ |
| ೪. ಜಿ.ಎಸ್. ಶಿವರುದ್ರಪ್ಪ, ಕಾವ್ಯತತ್ವ ಚಿಂತನೆ | ಪುಟ–೪೨ |
| ೫. ಅದೇ, | ಪುಟ–೨೧೬ |
| ೬. ಅದೇ, | ಪುಟ–೧೦೮ |
| ೭. ಅದೇ, | ಪುಟ–೯೮ |
| ೮. ಜಿ.ಎಸ್. ಶಿವರುದ್ರಪ್ಪ, ಕನ್ನಡ ಸಾಹಿತ್ಯ ಸಂದರ್ಭ, | ಪುಟ–೧೦೧ |
| ೯. ಅದೇ | ಪುಟ–೧೧೩ |
| ೧೦. ಅದೇ | ಪುಟ–೧೧೫ |

# ಅಧ್ಯಾಯ ೬

# "ನಾನೇಕೆ ಬರೆಯುತ್ತೇನೆ" ಲೇಖನಗಳ ಸ್ವರೂಪ

## ೧

೧. ದ.ರಾ. ಬೇಂದ್ರೆ

೨. ಎ.ಎನ್. ಮೂರ್ತಿರಾವ್

೩. ಶ್ರೀರಂಗ

೪. ಪು.ತಿ. ನರಸಿಂಹಾಚಾರ್

೫. ಸಿದ್ಧಯ್ಯ ಪುರಾಣಿಕ

ಇವರ "ನಾನೇಕೆ ಬರೆಯುತ್ತೇನೆ" ಎನ್ನುವ ವಿಚಾರವನ್ನು ಕುರಿತ ಲೇಖನಗಳನ್ನು ಆಯ್ದು, ಇಲ್ಲಿ ಒಂದೇ ಕಡೆ ಅಧ್ಯಯನಕ್ಕೆ ಒಳಪಡಿಸಲು ಕಾರಣವೇನೆಂದರೆ ಇವರು ಮೊದಲ ತಲೆಮಾರಿನವರು. ಆಧುನಿಕ ಕನ್ನಡ ಸಾಹಿತ್ಯವನ್ನು ಆರಂಭದಿಂದ ರಚಿಸುವುದರ ಮೂಲಕ ಬಲಪಡಿಸಿದವರು, ಬ್ರಿಟಿಷ್ ಆಡಳಿತವಿದ್ದ ಕಾಲಾವಧಿಯಲ್ಲಿ ಅದು ಉಂಟುಮಾಡಿದ ಸಮಾಜದಲ್ಲಿಯ ಪರಿಣಾಮಗಳನ್ನು ಅನುಭವಿಸಿದವರು. ಇವರಿಗೆ ತಮ್ಮ ಸ್ಥಳೀಯ ಬದುಕು, ಸಂಪ್ರದಾಯ, ನಂಬಿಕೆಗಳ ಜೊತೆಗೆ ಬದುಕುತ್ತಿದ್ದಾಗ ಬ್ರಿಟಿಷ್ ವಸಾಹತುಶಾಹಿ ಆಧುನಿಕತೆಯನ್ನು ಸಮಾಜದಲ್ಲಿ ತರುವ ಪ್ರಯತ್ನ ಮಾಡಿದಾಗ ಅದರಿಂದ ಉಂಟಾದ ಸಂಘರ್ಷಗಳನ್ನು ಅನುಭವಿಸಿದವರು. ಸಂಪ್ರದಾಯ ಮತ್ತು ಆಧುನಕತೆಯ ಜೊತೆಗೆ ತಮ್ಮ ಆಧ್ಯಾತ್ಮಿಕ ಮತ್ತು ಸಾಮಾಜಿಕ ಬದ್ಧತೆಯ ಮೂಲಕ ಅಪಾರವಾದ ಸಾಹಿತ್ಯವನ್ನು ರಚಿಸಿದವರು. ಸಾಹಿತ್ಯ ಅಂದರೆ ಏನು? ಅದರ ಮೂಲಕ ಸಮಾಜಕ್ಕೆ ಯಾವ ಕೊಡುಗೆಯನ್ನು ಕೊಡಬೇಕು? ಎಂಬುದರ ಬಗ್ಗೆ ಸಾಹಿತ್ಯದ ಮೂಲಕ ಚಿಂತಿಸಿದವರು. ಈ ಕಾರಣದಿಂದ ಈ ಅಧ್ಯಾಯದಲ್ಲಿ ಇವರ "ನಾನೇಕೆ ಬರೆಯುತ್ತೇನೆ" ಎನ್ನುವ ವಿಚಾರವನ್ನು ಅಧ್ಯಯನಕ್ಕೆ ಗುರಿ ಮಾಡಲಾಗಿದೆ.

## "ಸಾಹಿತ್ಯ ಮತ್ತು ಸಾರ್ಥಕತೆ"

**ಬೇಂದ್ರೆ**

ಕನ್ನಡದ ಕವಿಗಳಲ್ಲಿ ಪಂಪನ ತರುವಾಯ ಕನ್ನಡದ ಜೀವಾಳವನ್ನು ಹಿಡಿದು ಕನ್ನಡವನ್ನು ಮುಖ್ಯ ಭಾಷೆಯನ್ನಾಗಿಟ್ಟುಕೊಂಡು, ಆಡುಭಾಷೆಯಲ್ಲಿ ಸರಳವಾದ ಶೈಲಿಯಲ್ಲಿ ಕಾವ್ಯ ರಚನೆ ಮಾಡಿದ ಕವಿ ಬೇಂದ್ರೆ ಎಂದೇ ಹೇಳಬೇಕು. 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದ ಕನ್ನಡ ವಾಗ್ದೇವಿಯ ಭಂಡಾರದ ಬೀಗಮುದ್ರೆಯನ್ನು ಒಡೆದವರಲ್ಲಿ ವರಕವಿ ಬೇಂದ್ರೆಯವರೂ ಒಬ್ಬರು. ಬರಹದಲ್ಲಿಯ ಶಬ್ದಗಳ ಮೋಡಿಯಿಂದಾಗಿ ಇವರನ್ನು ಗಾರುಡಿಗವರ ಕವಿಗಳೆಂದು ಕರೆದಿದ್ದಾರೆ.

ಬೇಂದ್ರೆಯವರು "ಸಾಹಿತ್ಯ ಮತ್ತು ಸಾರ್ಥಕತೆ" ಎಂಬ ಲೇಖನದಲ್ಲಿ ತಾವು ಸಾಹಿತ್ಯವನ್ನು ಯಾಕೆ ಬರೆಯುತ್ತಾರೆ ಎಂಬ ಅಂಶವನ್ನು ಕುರಿತು ಚರ್ಚಿಸಿದ್ದಾರೆ. ಹಾಗೂ ತಾವು ಸಾಹಿತ್ಯ ರಚನೆ ತೊಡಗಿರುವುದರ ಪ್ರೇರಣೆ, ಪ್ರಭಾವಗಳನ್ನು ಕುರಿತು ತಮ್ಮ ಬಾಲ್ಯದ ಅನುಭವಗಳು, ಘಟನೆಗಳು ಎಳೆ ಎಳೆಯಾಗಿ ಗುರುತಿಸುತ್ತಾ, ಮುಂದುವರೆದು ನಿರ್ದಿಷ್ಟವಾದ ಕಾರಣವನ್ನು ಯಾಕೆ ಬರೆಯುತ್ತೇನೆ ಎಂದು ಹೇಳಲು ಕಠಿಣವಾದರೂ ತಾವು ಸಾಹಿತ್ಯವನ್ನು ಸಾರ್ಥಕತೆಗೋಸ್ಕರ ಎಂಬ ಅಂಶ ಹೇಳುತ್ತಾರೆ. ಅಂದರೆ ಸಾರ್ಥಕತೆ ಎಂದರೆ ಯಾವುದೇ ಫಲಪೇಕ್ಷೆ ಇಲ್ಲದೆ ಇತರರು ಓದಿ ಆನಂದಿಸುವುದು ಹಾಗೂ ಸಫಲತೆ ಹೊಂದುವುದು. ಹೀಗೆ ಸಫಲತೆ ಹೊಂದುವುದಕ್ಕಾಗಿ ಸಾಹಿತ್ಯ ಕೃಷಿ ಕೈಗೊಂಡು ಆಮೂಲಕ ಗೆಳೆಯರನ್ನು ಕಂಡುಕೊಂಡರು.

ಇವರಿಗೆ ಸಾಹಿತ್ಯ ಪ್ರೀತಿ ಬಂದುದು, ಅವರ ಬಾಲ್ಯದಲ್ಲಿಯೇ ಅದು ಹೈಸ್ಕೂಲ್‌ನಲ್ಲಿ. ನಂತರ ಚಿಗುರು ಒಡೆದದ್ದು ಫರ್ಗ್ಯುಸನ್ ಕಾಲೇಜಿನಲ್ಲಿ[1] ಪದವಿ ಓದುವಾಗ ಅಂದರೆ ಹೈಸ್ಕೂಲ್ ಶಾಲೆಯ ಪರಿಸರ, ಅಲ್ಲಿನ ಅಧ್ಯಾಪಕರು ಸಾಹಿತ್ಯದ ಒಲವು ಮೂಡಿಸಿ, ಬಾಲ್ಯದಲ್ಲಿಯೇ ಭದ್ರಬುನಾದಿಯನ್ನು ಹಾಕಿರುವುದು ಈ ವಾಕ್ಯದಿಂದ ಗಮನಿಸಬಹುದು. "ಬೆಳೆಯುವ ಸಿರಿ ಮೊಳಕೆಯಲ್ಲಿಯೆಂಬಂತೆ" ಮತ್ತೊಂದು ಬಲವಾದ ಪ್ರೇರಣೆ ಬರೆಯಲು ಅನುವು ಮಾಡಿಕೊಟ್ಟರು. ಕನ್ನಡ ಭಾಷೆ, ಅದರ ಕಾವ್ಯ, ಸಾಹಿತ್ಯ, ಇಂಗ್ಲಿಷ್, ಸಂಸ್ಕೃತ, ಮರಾಠಿ, ಕಾವ್ಯ ಸಾಹಿತ್ಯಗಳಿಗೆ ತಾವು ಸಮನಾಗಿ ಸರಿಮೇಲಾಗಬೇಕೆಂಬ ಅಂಶದಿಂದ ಸಾಹಿತ್ಯದತ್ತ ದಾಪುಗಾಲು ಹಾಕಿದರು.[2] ಈ ಅಂಶವನ್ನು ಗಮನಿಸಿದಾಗ ಇವರಿಗೆ ಈಗಾಗಲೇ ಸಂಸ್ಕೃತ, ಮರಾಠಿ, ಇಂಗ್ಲಿಷ್ ಸಾಹಿತ್ಯದ ಪ್ರಭಾವ ಹಾಗೂ ಅವುಗಳ ಓದು, ಪಾಂಡಿತ್ಯಗಳಿಸಿಕೊಂಡಿರಬೇಕು. ಹಾಗಾಗಿ ಅದಕ್ಕಿಂತಲೂ ತಾವು ಕನ್ನಡ ಸಾಹಿತ್ಯದಲ್ಲಿ

ಸರಿಮೇಲಾಗಬೇಕೆಂಬ ಉದಾತ್ತವಾದ ಆಕಾಂಕ್ಷೆಯಿಂದ ಬರೆಯಲು ಮುನ್ನುಗ್ಗಿರಬೇಕು.

ನವೋದಯ ಪಂಥಕ್ಕೆ ಸೇರಿದ ಬೇಂದ್ರೆಯವರು, ಆ ಸಂದರ್ಭದಲ್ಲಿ ನಾಡಿನ ಪರಿಕಲ್ಪನೆ, ದೇಶಾಭಿಮಾನ ಕುರಿತಾದ ಕವನಗಳ ರಚನೆ ಮಾಡಿರುವುದು ತಾಯಿಯು ಹೇಳುತ್ತಿದ್ದ ಅಭಂಗ ದಾಸರ ಪದಗಳು, ಊರಲ್ಲಿ ವರ್ಷತುಂಬ ಕೇಳುತ್ತಿದ್ದ ಲಾವಣಿ, ಅನುಭವ ಪದಗಳು ಮಧ್ವಾಚಾರ್ಯಯರೊಡನೆ ಆಗುತ್ತಿದ್ದ ತತ್ವಚರ್ಚೆ, ಅನುಭವ ಸಲ್ಲಾಪಗಳು ಇವರ ಪ್ರತಿಯೊಂದು ಕಾವ್ಯದಲ್ಲಿ ಕುಸುರು ಹುಟ್ಟಿಸಿತು ಎನ್ನುತ್ತಾರೆ.[8] 

ಇವುಗಳನ್ನು ಆಲಿಸಿದ ಬೇಂದ್ರೆ ತಮ್ಮ ಬರವಣಿಗೆಗೆ ಪೂರಕವಾಗಿ ಕಾರ್ಯನಿರ್ವಹಿಸಿದವು. ಉದಾ: ಹೆಜ್ಜ್ಯಾಗ-ಗೆಜ್ಜ್ಯಾಗ ಕವಿರಸಿಕರಿಗೆ ನನ್ನ ಹಾಡು ಇವುಗಳಲ್ಲಿ ನೋಡಬಹುದು.

ಗೆಳೆಯರ ಗುಂಪು ಒಂದು ಸ್ವಾಭಾವಿಕ ಬೆಳವಣಿಗೆಯಲ್ಲಿತ್ತು. ಅದು ಹೊರಗಣ್ಣಿಗೆ ಗುಂಪಾಗಿಯೂ ಒಳಗಣ್ಣಿಗೆ ಮೂರ್ತಿ ಶಿಲ್ಪ ಶಾಲೆಯಾಗಿಯೂ ರೂಪಗೊಳ್ಳುತ್ತಿತ್ತು.

ಗೆಳೆಯರ ಗುಂಪಿನಲ್ಲಿ ಚರ್ಚೆಗಳು ಕಲ್ಲನ್ನು ಕೆತ್ತಿ ಮೂರ್ತಿಶಿಲ್ಪ ಮಾಡುವಂತೆ ಗೆಳೆಯರ ಗುಂಪಿನಲ್ಲಿ ವಿವಿಧ ವಿಷಯದ ಚರ್ಚೆಯನ್ನು ಬರವಣಿಗೆಯ ಮೂಲಕ ಕಂಡುಕೊಂಡರು. ಗುಂಪಿನಲ್ಲಿ ಎಲ್ಲಾ ವಿಷಯಗಳ ಚರ್ಚೆಗಳು ಒಳಗೊಂಡು ಕೊನೆಗೊಂದು ಬರವಣಿಗೆಯೆಂಬ ಮೂರ್ತಿಶಿಲ್ಪ ತಯಾರಾಗುತ್ತಿದ್ದವು ಎಂಬ ಅಂಶವನ್ನು ಮನಗಾಣಬಹುದು.

ಒಂದು ಮಹಾವಸ್ತ್ರದ ಎಳೆಯನ್ನು ಎಣಿಸಿಹೇಳಬಹುದು. ಜೀವನದ ಎಳೆಗಳನ್ನು ಎಷ್ಟೊಂದು ಹೇಳಬೇಕು? ಅಂದಾಗ, ಬೇಂದ್ರೆಯವರು ಬರವಣಿಗೆಗೆ ಗೆಳೆಯರು, ಶಾಲೆ, ಕಾಲೇಜು, ಬಾಲ್ಯ, ಕೌಟುಂಬಿಕ, ಪರಿಸರ ಎಲ್ಲರೂ ಸಾಹಿತ್ಯ ರಚನೆಗೆ ಪೋಷಕಗಳಾದವು. ಅವುಗಳ ಎಳೆಯನ್ನು ಪ್ರತಿಯೊಂದು ಹೇಳಲು ಆಗುವುದಿಲ್ಲ. ಅಷ್ಟೊಂದು ಹಲವಾರು ಅಂಶಗಳು ಪೋಷಕಗಳಾಗಿರುವುದು ಕಂಡುಬರುತ್ತದೆ.

ಬೇಂದ್ರೆಯವರು ತಮ್ಮನ್ನು ತಾವು ತಾವು ಯಾರು ಎಂದು ಅರ್ಥಮಾಡಿಕೊಳ್ಳಲು ತಾಯಿ ಜೀವನದಿಂದ ವರ್ಧಿತವಾದ ಉದ್ದೀಪಿತವಾದ ಸ್ವಭಾವವು, ಕನ್ನಡ ಮಾತಿನ ಮೂಲಕ ಆ ನಾಡಿನ ನುಡಿಯನ್ನು ಅರ್ಥ ಮಾಡಿಕೊಂಡು ಇನ್ನೊಂದು ವ್ಯಾಪಕ ಭಾವ ಪಡೆದು "ವಸುದೈವ ಕುಟುಂಬಿಕ" ಭಾವದಲ್ಲಿ ತಾನೊಬ್ಬ ಎಂಬ ಅರ್ಥದಲ್ಲಿ ಪಾರಿಭಾವಿಸಿದ್ದಾರೆ, ಅಗಣಿತ ಸೂರ್ಯದಿಂದ ತುಂಬಿದ ಈ ವಿಶ್ವಸಂಸ್ಥೆಯಲ್ಲಿ ತಾವು ಯಾವ ಗಿಡದ ತೊಪ್ಪಲು? ಎಂಬ ಪ್ರಶ್ನೆಯನ್ನು ಹಾಕಿಕೊಂಡು, ತಾವೊಬ್ಬ ಸಾಮಾನ್ಯ ಕವಿ ಎಂಬ ಅರ್ಥದಲ್ಲಿ ಹೇಳುತ್ತಾರೆ.

ಹಾಗೆಯೇ ತಮ್ಮ ಕವನ ಸಂಕಲನಗಳನ್ನು ಕುರಿತು ಅವರು ಆನಂದ ಪಡುತ್ತಾರೆ. ಹೇಗೆಂದರೆ ಮೂರ್ತಿ, ಕಾಮಕಸ್ತೂರಿಗಳು ಎರಡು ಪರಸ್ಪರ ವಿರುದ್ಧ ಜಾತಿಗೆ ಸೇರಿದ್ದರೂ ತಮ್ಮ ಸಂಕೇತ ಸಾಧಾರಣತೆಯಿಂದ ವಿಶ್ವ ಕವನಗಳಾಗುತ್ತವೆ. ಇದು ಹೆಮ್ಮೆಯ ಸಂಕೇತ ಹಾಗೂ ಇವರ ಕಾವ್ಯ ಜನ್ಮಕ್ಕೆ ಟೀಕೆ ಮತ್ತು ಪ್ರತಿಟೀಕೆಗಳು ಎಚ್ಚರವನ್ನು ಕೊಟ್ಟಿದೆ ಎಂದು ಹೇಳುವಲ್ಲಿ ಮಾಸ್ತಿ, ಪಾಟೀಲಪುಟ್ಟಪ್ಪ, ವೀಸೀ, ತಿಂ.ನಂ.ಶ್ರೀ. ಗೋಕಾಕರಂತೆ ಪಾಟೀಲ

ಪುಟ್ಟಪ್ಪ, ಈಶ್ವರನ್, ಅಣ್ಣಾರವ್, ಲಿಂಗಣ್ಣ, ಜೋಶಿ ಗಲಗಲಿ, ಶ್ರೀಧರ ಇವರ ಲೇಖನಗಳು ಟೀಕೆ ಪ್ರತಿಟೀಕೆಗೆ ಸಾಕ್ಷಿಯಾಗಿ ನಿಲ್ಲುತ್ತವೆ.[೪]

ಸೃಷ್ಟಿಯಲ್ಲಿ ಈ ಸತ್ವಭಾವ, ಕ್ರಿಯೆಗಳ ಆಟವು ವ್ಯಾಚ್ಯದಲ್ಲಿ ವಾಕ್ಯವಾದರೆ ಧ್ವನಿಯಲ್ಲಿ ಕಾವ್ಯವಾಗುತ್ತದೆ ಎಂಬ ಅಂಶವು ಕಾವ್ಯದ ಬಗ್ಗೆ ಹೇಳಿಕೊಂಡಿರುವ ವ್ಯಾಖ್ಯಾನ ಎಂಬ ಅರ್ಥ ಸೂಚಿಸುತ್ತದೆ.

ಹೇಗೆಂದರೆ, ಅಕ್ಕರತೆಯೆಂದರೆ ಅಕ್ಕನಿಗೆ ತಂಗಿಗೆ ಬಂಗಾರ ಎಂದು ಕರೆದರೆ ಮಗಳಿಗೆ ಎದೆ ಮುಗಳೆ ಎಂದು ಭಾವಿಸಿದರೆ ಆ ಕ್ರಿಯೆಯಲ್ಲಿ, ಆ ಭಾವದಲ್ಲಿ ಒಂದು ಕಾವ್ಯದ ಪಾಕ ನಡೆದದ್ದು ಅನುಭವಕ್ಕೆ ಬರುವುದು.

ಹೀಗೆ ಎಲ್ಲರ ಸತ್ವವು ಸಕಲ ಸತ್ವಗಳೊಡನೆ ಒಂದು ಕ್ರಿಯಾ ಪರಂಪರೆಯಿಂದ ಭಾವ ಪರಿಣಿತಿಯನ್ನು ಪರಿಪುಷ್ಟಿಯನ್ನು ಪಡೆಯುತ್ತದೆ. ಇವುಗಳ ಮೂಲಕ ಭಾವದ ಭಾಷೆಯು. ಕಾವ್ಯದ ಭಾಷೆಯಾಗಿ ರೂಪಾಂತರ ಹೊಂದುತ್ತದೆ. ಇವು ತಮ್ಮ ಕವನಗಳಿಗೆ ಪ್ರೇರಕವಾಗಿವೆ ಎನ್ನುತ್ತಾರೆ. ಈ ಅಂಶವನ್ನು ನೋಡಿದಾಗ ಅವರ ಸಾಹಿತ್ಯದಲ್ಲಿ ಇನ್ನೂ ತಾವು ಮೌಲಿಕವಾದ ಸಾರ್ಥಕತೆಯನ್ನು ಕಂಡಿಲ್ಲ ಎಂಬ ಭಾವ ಅವರನ್ನು ಪ್ರಚೋದಿಸುತ್ತಿರುವುದು ಕಾಣಬಹುದು. ಹಾಗಾಗಿ ಸಾರ್ಥಕತೆಗೋಸ್ಕರ ತಾವು ಸಾಹಿತ್ಯ ಬರೆಯುತ್ತಾರೆ ಎಂಬ ಅಂಶ ಹೊರಹಾಕುತ್ತಾರೆ.

ಕಾಶಿಯಾತ್ರೆಯತ್ತ ಹೊರಟ ಒಂದೊಂದು ಹೆಜ್ಜೆಯೂ ಅದೇ ಹಾದಿಯಲ್ಲಿದ್ದರೂ ಹೆಜ್ಜೆಗೊಂದು ಕಾಶಿಯಲ್ಲ. ಆದರೂ ಹೆಜ್ಜೆಗೊಂದು ಕಾಶಿಯಿದ್ದಂತೆ.[೫] ಇದು ಬರವಣಿಗೆ ಸಾಹಿತ್ಯಕ್ಕೆ ಮಾದರಿಯಾಗಿದೆ. ಬರೆಯುವವರು ಬರೆಯುತ್ತಾ ಹೋದಂತೆ ಅವರಿಗೆ ಕೊನೆ ಎಂಬುದೇ ಇಲ್ಲ. ಪ್ರತಿಯೊಂದು ಬರವಣಿಗೆಯು (ಹೆಜ್ಜೆಗೊಂದು ಕಾಶಿಯಿದ್ದಂತೆ) ಹೊಸ ತಿರುವನ್ನು ಕೊಡುತ್ತಾ ಮತ್ತೆ ಮುನ್ನುಗ್ಗಲು ಎಡೆ ಮಾಡಿಕೊಡುತ್ತವೆ.

ಶ್ರೀ ಅರವಿಂದರ ಯೋಗಸಿದ್ಧಿಯಲ್ಲಿಯೂ ಶ್ರೀ ಮಹಾತಾಯಿಯವರ ಪ್ರವರ್ತನೆಯಲ್ಲಿಯೂ ಇವರ ಜೀವನ ಯೋಗ-ಶಾಲೆಯಾಗಿದೆ. ಅರವಿಂದರ ತತ್ವ ಚಿಂತನೆಗಳು. ಮಹಾತಾಯಿಯವರ ಪ್ರವರ್ತನೆಯಲ್ಲಿ ತಮ್ಮ ಜೀವನ ಯೋಗಶಾಲೆಯಾಗಿಸಿಕೊಂಡಿದ್ದಾರೆ. ಈ ಒಂದು ನಿಟ್ಟಿನಲ್ಲಿ ಸಾಹಿತ್ಯವು ಸಾರ್ಥಕತೆಗೋಸ್ಕರ ಬರವಣಿಗೆಗೆ ತೊಡಗಿರುವುದು ಅಂಶ ಗೋಚರಿಸುತ್ತದೆ. ಸಾಹಿತ್ಯವೇ ಜೀವನ, ಜೀವನವೇ ಸಾಹಿತ್ಯ ಎಂಬ ಗೂಢಾರ್ಥದಲ್ಲಿ ಸಾಹಿತ್ಯವು ಜೀವನದ ಪದಾರ್ಥ ಅವು ಬೇರೆ ಬೇರೆ ಅಲ್ಲ. ಒಂದೇ ಎಂದು ನಂಬಿದವರು ಈ ಬೇಂದ್ರೆಯವರು. ಹಾಗಾಗಿ ನವೋದಯ ಪಂಥಕ್ಕೆ ಸೇರಿದ ಬೇಂದ್ರೆಯವರು ಬರವಣಿಗೆಯ ಸಂದರ್ಭದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಇಹಪರ ಕಲ್ಪನೆ ಯೋಗಸಿದ್ಧಿಯ ಮೂಲಕ ರಾಷ್ಟ್ರೀಯತೆ, ವೈಜ್ಞಾನಿಕ ವಿಚಾರಗಳು ಇವರ ಲೇಖನದಲ್ಲಿ ಕಾಣಬಹುದು.

ಕಾವ್ಯದ ಪ್ರೇರಣೆಗಳನ್ನು ತಮ್ಮ ಪರಿಸರದ ಸಾಹಿತ್ಯದೊಳಗಿನಿಂದ ಪಡೆಯಬೇಕೆಂಬ ಹುಡುಕಾಟಗಳುಳ್ಳ ಈ ಲೇಖನ ಕಂಡುಬರುತ್ತದೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಸಾಹಿತ್ಯ ಮತ್ತು ಸಾರ್ಥಕತೆಗೋಸ್ಕರ ಸಾಹಿತ್ಯ ರಚನೆ
* ಹೈಸ್ಕೂಲ್ ಶಾಲೆಯ ಪರಿಸರ ಹಾಗೂ ಅಧ್ಯಾಪಕರು
* ಕನ್ನಡ ಭಾಷೆ ಹಾಗೂ ಅವರ ಕಾವ್ಯ, ಸಾಹಿತ್ಯ ಇಂಗ್ಲಿಷ್, ಸಂಸ್ಕೃತ, ಮರಾಠಿ ಕಾವ್ಯ, ಸಾಹಿತ್ಯಗಳಿಗೆ ಸರಿ ಮೇಲಾಗಬೇಕೆಂಬ
* ತಾಯಿಯು ಹೇಳುತ್ತಿದ್ದ ಅಭಂಗ ದಾಸರ ಪದಗಳು
* ಮೌಲಿಕವಾದ ಸಾಹಿತ್ಯದ ಸಾರ್ಥಕತೆ ಅಂಶ
* ಅರವಿಂದರ ಯೋಗಸಿದ್ಧಿ, ತತ್ವಚಿಂತನೆಗಳು
* ಗೆಳೆಯರ ಬಳಗ

# "ಲೇಖಕನಾಗಿ ನನ್ನ ಅನುಭವ"

**ಪ್ರೊ. ಎ.ಎನ್. ಮೂರ್ತಿರಾವ್**

ಕನ್ನಡದ ಪ್ರಬಂಧಕಾರ ವಿಮರ್ಶಕ, ಪತ್ರಕಾರ, ಅನುವಾದಕಾರ ಎಂದು ಹಲವಾರು ಪಟ್ಟಿಗಳನ್ನು ಸಂತೋಷದಿಂದ ಹಚ್ಚಬಹುದಾದ ವ್ಯಕ್ತಿ. ಅಕ್ಕಿ ಹೆಬ್ಬಾಳು ನರಸಿಂಹ ಮೂರ್ತಿರಾವ್ ಇವರು ತಾವು ಯಾಕೆ ಬರೆಯುತ್ತೀರಿ ಎಂಬ ಪ್ರಶ್ನೆಗೆ ಉತ್ತರ 'ಲೇಖಕನಾಗಿ ನನ್ನ ಅನುಭವ' ಅಂದರೆ ತಾವು ಸಾಹಿತ್ಯ ರಚಿಸಿದ ಒಟ್ಟು ಪೂರ್ಣದ ಒಂದು ಚಹರೆ ಆ ಅನುಭವವನ್ನು ಹೇಳುತ್ತಾರೆ. ಆ ಮೂಲಕ ಒಂದೊಂದು ಘಟನೆಗಳು ಬರವಣಿಗೆಗೆ ಸ್ಫೂರ್ತಿದಾಯಕವಾಗಿರುವುದು ಕಂಡುಬರುತ್ತದೆ.

ಪ್ರಸ್ತುತ ಈ ಲೇಖನದಲ್ಲಿ ಮೊದಲ ಲೇಖನ ಪ್ರಕಟವಾದ ನಾಟಕೀಯ ಪ್ರಸಂಗವನ್ನು ಕಾಣುತ್ತೇವೆ. ಹೇಗೆಂದರೆ ಇವರು ಮೈಸೂರು ವಿಶ್ವವಿದ್ಯಾಲಯ ಸಂಘದ ಅಧ್ಯಾಪಕ ಕಾರ್ಯದರ್ಶಿಯಾಗಿದ್ದಾಗ ಸಂಘದ ಪತ್ರಿಕೆಯನ್ನು ಸಂಪಾದಿಸುವ ಕೆಲಸ ಇವರ ಜವಾಬ್ದಾರಿಯಾಗಿರುವುದರಿಂದ ಯೂನಿಯನ್ ಪತ್ರಿಕೆಗೆ ಬಂದ ಕನ್ನಡ ಲೇಖನಗಳ ಜೊತೆ ತಾವು ಮಾರ್ಕ್‌ಟ್ವೆಯನ್ ಪುಸ್ತಕವೊಂದರಿಂದ ಒಂದು ಭಾಗ ಭಾಷಾಂತರಿಸಿ ಅದಕ್ಕೆ "ನಮ್ಮ ಮಾರ್ಗದರ್ಶಿ" ಎಂಬ ಶೀರ್ಷಿಕೆ ನೀಡಿದರು. ಇವರು ಕಾಲೇಜಿನಲ್ಲಿ ಕನ್ನಡ ಓದಿರದೇ ಇರುವುದರಿಂದ ಇದು ತಪ್ಪಿರಬಹುದು ಎಂದು ತಮ್ಮ ಹೆಸರು ಸೂಚಿಸುವ ಬದಲು "ವಾಮನ" ಎಂಬ ಹೆಸರು ಹಾಕಿ ಅವುಗಳ ಪರಿಶೀಲನೆಗೆ ಮತ್ತು ಆಯ್ಕೆಗೆ ಮಿತ್ರರಾದ ತೀ.ನಂ. ಶ್ರೀಕಂಠಯ್ಯನವರಿಗೆ ಸೂಚಿಸಿದರು ಅವರು ಎಲ್ಲ ಲೇಖನಗಳನ್ನು ಓದಿ ವಾಮನ ಅನ್ನೊ ಹುಡುಗ ಬರೆದಿರುವ "ನಮ್ಮ ಮಾರ್ಗದರ್ಶಿ" ಲೇಖನ ಚನ್ನಾಗಿದೆ ಅವನನ್ನು ಪತ್ತೆ ಮಾಡಿ ಅಂದರು. ಆಗ ಮೂರ್ತಿರಾಯರು ಕೈಮುಗಿದು ಎದ್ದುನಿಂತು ನಾಟಕೀಯವಾಗಿ ಬೆನ್ನುಬಗ್ಗಿ ನಮಸ್ಕಾರ ಮಾಡಿ ಮೂರ್ತಿರಾಯರು ತಮ್ಮನ್ನು ನೋಡಲು ಸೂಚಿಸಿದರು ಎಂದರು ಹೀಗೆ ಬರವಣಿಗೆಯ ಮೊದಲ ಹಂತವೇ ಅವರಿಗೆ ಹಿತವಾದ ಅನುಭವ ಕೊಟ್ಟಿತು. ಇದು ಮುಂದೆ ಬರೆಯಲು ಅವರಿಗೆ ಸ್ಫೂರ್ತಿದಾಯಕವಾಯಿತು. ನಂತರ 'ಪ್ರಭೋಧಕ' ಎಂಬ ಪತ್ರಿಕೆಗಾಗಿ ಬರೆಯಲಾರಂಭಿಸಿದ ನಾಟಕಗಳು ಪ್ರಭೋಧಕ ಎಂಬ ಮಾಸ ಪತ್ರಿಕೆಯನ್ನು ಹೊರಡಿಸುವ ಉದ್ಯಮವನ್ನು ಬಿ. ಚಂದ್ರಶೇಖರಯ್ಯನವರು ಕೈಗೊಂಡಿದ್ದರು. ಅವರು ಇದ್ದದ್ದು ಬೊಂಬಾಯಿಯಲ್ಲಿ ಪತ್ರಿಕೆ ಅಚ್ಚಾಗಬೇಕಾಗಿದ್ದು ಮೈಸೂರಿನಲ್ಲಿ ಆದ್ದರಿಂದ ಅವರ ಕೆಲಸದಲ್ಲಿ ಗಣನೀಯವಾದ ಭಾಗ ಇವರ ತಲೆಯ ಮೇಲೆ ಬಿದ್ದಿದ್ದರಿಂದ ಲೇಖನಗಳ

ಕೊರತೆ ಬಂದಾಗ ಇವರೇ ಬರೆಯಬೇಕಾಗಿತ್ತು. ಹಾಗಾಗಿ ಕೆಲವೊಂದು ಬಾರಿ ನಾಟಕ ರೂಪಾಂತರವನ್ನು ಕೈಗೊಂಡರು. ನಂತರ ಸ್ವತಃ ತಾವೇ ನಾಟಕ ರಚನೆಗೆ ತೊಡಗಿದರು ಎರಡು ಮತ್ತು ಮೂರು ದೃಶ್ಯ ಬರೆದು ಬರವಣಿಗೆ ಸರಿಯಿಲ್ಲ ಎಂದು ಸುಮ್ಮನೆ ತಲೆಯನ್ನು ಹೊತ್ತು ಕುಳಿತಿದ್ದರು.

ಅದೇ ಸಂದರ್ಭದಲ್ಲಿ ಪ್ರೊ. ವೆಂಕಟಣ್ಣಯ್ಯನವರು ಇವರನ್ನು ಕಂಡು ಏನ್ರಿ ಏನೊ ಬರಿತಿರೊಹಾಗಿದೆ. ಕಾಗದಗಳನ್ನು ನೋಡಿ ಅವುಗಳನ್ನು ಓದಿ, ನಾಟಕ ಎಂದು ಸ್ಪಷ್ಟಪಡಿಸಿಕೊಂಡು ಶೈಲಿ ಚೆನ್ನಾಗಿದೆ. ಬರಿ ಎಂದು ಹುರಿದುಂಬಿಸಿದರು. ಹಾಗೆಯೇ ಬರೆದ ಇವರು 'ಆಷಾಡಭೂತಿ' ನಾಟಕ ಪ್ರಭೋಧಕರಲ್ಲಿ ಪ್ರಕಟವಾಯಿತು.[೬] ಹೀಗೆ ಪತ್ರಿಕೆಗೊಸ್ಕರ ಬರೆದ ನಾಟಕಗಳು, ವೆಂಕಣ್ಣಯ್ಯನವರ ಪ್ರೋತ್ಸಾಹ ಬರಹಕ್ಕೆ ಸ್ಫೂರ್ತಿ ನೆಲೆಯಾಯಿತು.[೭] ಒಂದು ವೇಳೆ ಶ್ರೀಕಂಠಯ್ಯ, ತೀ.ನಂ.ಶ್ರೀ., ವೆಂಕಣ್ಣಯ್ಯ ಇವರು ಪ್ರೋತ್ಸಾಹಿಸದೆ ಹೋಗಿದ್ದರೆ, ಇವರು ಎಲೆಮರೆ ಕಾಯಿಯಂತೆ ಇರುತ್ತಿದ್ದರೋ ಏನೋ ಅದೃಷ್ಟವಶಾತ್ ಇವರು ಇಂದು ಪ್ರಬಂಧ ಪ್ರಕಾರಕ್ಕೆ ಕೈಹಾಕಿ ಸೈ ಎನಿಸಿಕೊಂಡಿದ್ದಾರೆ.

ವಿಮರ್ಶೆಗೆ ಕೈಹಾಕಿದ ಅನುಭವಗಳು ಪ್ರಸ್ತುತ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ. ವಿಮರ್ಶೆಗೆ ಬಂದ ಒಂದು ಪುಸ್ತಕ ಉತ್ತರ ಕರ್ನಾಟಕದ ಲೇಖಕರೊಬ್ಬರು ಬರೆದದ್ದು ತಾವು ಬರೆದ ವೈಶಿಷ್ಟಗಳು, ಉಚ್ಚಾರಣೆಗಳು ವಿಮರ್ಶೆಯಲ್ಲಿ ಅಷ್ಟೊಂದು ತಿಳಿಯದೆ ಇದ್ದರೂ ಅವರ ಸಹಾಸಕ್ಕೆ ಕೈಹಾಕಿರುವುದು ವಿಪರ್ಯಾಸ ಹಾಗೂ ತಾವು ಬರೆದ ವಿಮರ್ಶೆ ಮೇಲ್ಮಟ್ಟದ್ದಲ್ಲ ಎಂದು ತಿಳಿದು ಇನ್ನು ಉತ್ತಮವಾಗಿ ಬರೆಯಲು ಮುಂದಾದರು.

ಹಾಗೂ 'ಕೈಲಾಸಂ' ದಿನದ ಸಂದರ್ಭದಲ್ಲಿ ಇವರಿಗೆ ಮಾತಾಡಲು ಸಂಘವೊಂದರಿಂದ ಆಹ್ವಾನ ಬಂದಿತ್ತು. ಅಂದು ಕೈಲಾಸಂ ಅವರ ಕೃತಿಗಳನ್ನು ಅದರ ಸತ್ಯಾಂಶವನ್ನು ಹಾಗೂ ದೋಷಗಳನ್ನು ಇವರು ಪ್ರಸ್ತಾಪಿಸಿದ್ದರಿಂದ ಅಲ್ಲಿಯೂ ವ್ಯವಸ್ಥಾಪಕರಿಗೆ ಇದು ಹಿಡಿಸಲಿಲ್ಲ. ಅವರ ಪ್ರಕಾರ ಅಂದು ಅವರನ್ನು ಹೊಗಳಿ ಮಾತಾಡುವುದಾಗಿತ್ತು. ಇದು ಇವರಿಂದ ಅಸಾಧ್ಯವಾಗಿತ್ತು. ಹಾಗೂ ಒಬ್ಬ ವ್ಯಕ್ತಿ ಸತ್ತ ನಂತರವೂ ಅವರ ಬಗ್ಗೆ, ಕೃತಿಯ ಬಗ್ಗೆ ನಿರ್ಭಿಡೆಯಾಗಿ ಮಾತನಾಡುವುದು ತಪ್ಪೆ? ಒಂದು ಒಬ್ಬ ಲೇಖಕರ ಹಿರಿಮೆ ತಿಳಿಯಬೇಕಾದರೆ ಅವರ ಪ್ರತಿಭೆಯ ಸ್ವರೂಪ ನಿರ್ದೇಶಿಸಬೇಕು. ವ್ಯಾಪ್ತಿ ಮೀತಿ ಇತ್ಯಾದಿಗಳು ಗಮನಿಸಬೇಕು ಎಂಬುದು ಇವರ ಪ್ರಸಂಗದಿಂದ ತಿಳಿದು ಬರುತ್ತದೆ. ನಂತರ ವಿಮರ್ಶೆಗೆ ಕೈ ಹಾಕಲಿಲ್ಲ.[೮]

ಪ್ರತಿಯೊಬ್ಬನಲ್ಲಿ ಕೊನೆಯ ಪಕ್ಷ ಒಂದು ಕಾದಂಬರಿಗಾದರೂ ಸಾಕಾಗುವಷ್ಟು ಸಾಮಗ್ರಿ ಇದೆಯೆಂದು ಯಾರೋ ಒಬ್ಬಾತ ಹೇಳಿದ್ದಾನೆ. ನನ್ನಲ್ಲೂ ಅಷ್ಟು ಇರಬೇಕು ಎಂದು ಸಣ್ಣಕಥೆ ಒಂದೆರಡು ಬರೆದರು ಅದು ಹಿಡಿಸದೆ ಹೋಯಿತು. ಈ ಅಂಶವನ್ನು ಗಮನಿಸಿದಾಗ ಇವರಿಗೆ "ವಿಮರ್ಶಕ ದೆವ್ವವೊಂದು" ಇವರನ್ನು ಮೆಟ್ಟಿ ಕುತಿತ್ತು. ಅದು ಬೇರೆ ಬರವಣಿಗೆಗೆ ಹೆಚ್ಚು ಅವಕಾಶ ಕೊಡಲಿಲ್ಲ. ಕಥೆ, ಕಾದಂಬರಿ, ಬರವಣಿಗೆ ಬರೆಯಲು ಹೋದರು ಅದರಲ್ಲಿ

ವಿಮರ್ಶಕ ಪಾಲು ಬೇಡುವಂತೆ ಇರುತ್ತಿತ್ತು. ಇದರಿಂದ ಕಥೆ, ಕಾದಂಬರಿ ಬರೆಯದೆ ವಿಮರ್ಶಾತ್ಮಕ ಪ್ರಬಂಧಗಳನ್ನು ಹೆಚ್ಚು ಬರೆದಿದ್ದಾರೆ.

ರಂ.ಶ್ರೀ. ಮುಗಳಿಯವರ ಸಂಪಾದಿಸಿದ ಸಂಕಲನಕ್ಕಾಗಿ ಬರೆದ 'ಹೋಟಲುಗಳು" ಪ್ರಬಂಧ ಆಕಾಶವಾಣಿಯಲ್ಲಿದ್ದಾಗ, ಆಶುಭಾಷಣ ಪ್ರಸಾರ ಇವು ಅನಿವಾರ್ಯವಾಗಿ ಒದಗಿ ಬಂದವು.

ಪ್ರಸ್ತುತ ಈ ಲೇಖನದಲ್ಲಿ ಎ.ಎನ್. ಮೂರ್ತಿರಾವ್ ಅವರು ತಾವು ಬರೆಯಬೇಕೆಂಬ ಹವ್ಯಾಸದಿಂದ ಬರೆದವರೆಲ್ಲ ಗೆಳೆಯರ ಪ್ರೋತ್ಸಾಹ ಹಾಗೂ ಅನಿವಾರ್ಯವಾಗಿ ಒದಗಿ ಬಂದ ವಿವಿಧ ಪತ್ರಿಕೆಗಳಿಗಾಗಿ ಬರೆಯಲೇಬೇಕಾದ ಪ್ರಬಂಧ, ನಾಟಕ, ವಿಮರ್ಶೆಗಳು ಏಕೆಂದರೆ ಅಲ್ಲಿ ಕಾರ್ಯನಿರ್ವಹಿಸುತ್ತಿದ್ದರಿಂದ ಹಾಗೆಯೇ ಆಕಾಶವಾಣಿಯಲ್ಲಿನ ಅನಿರೀಕ್ಷಿತವಾಗಿ ತಾವೇ ಪ್ರಸಾರ ಮಾಡುವ ಭಾಷಣಗಳು ಇವು ಬೇರೆಯವರಿಗಾಗಿಯೇ ಬರೆದಂತವು. ತಾವೇ ಬರೆಯಬೇಕೆಂಬ ಹಂಬಲ ಇಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ತಾವೇ ನಾನು ಕೂತು ಬರೆವ ಸಂಭವ ಕಡಿಮೆ. ಲೇಖನಕ್ಕಾಗಿ ಕರೆ ಬಂದರೆ ಆಗುವುದಿಲ್ಲ ಎನ್ನಬಾರದು ಎಂಬ ಅಂಶದಿಂದ ಬರವಣಿಗೆಗೆ ಧುಮುಕಿ ತಾವು ಬರವಣಿಗೆಯನ್ನು ಕರಗತ ಮಾಡಿಕೊಂಡರು.

ಹೀಗೆ ಸಾಹಿತ್ಯದ ಆರಂಭ ತೊಡಕುಗಳು, ಮುನ್ನಡೆಗಳು ಯಾವ ಬಗೆಯ ಸಾಹಿತ್ಯ ರಚನೆ ಜೀವನದುದ್ದಕ್ಕು ಆರಂಭಿಸಿದರು ಎಂಬುದು ಈ ಲೇಖನದಲ್ಲಿ ಕಂಡುಬರುತ್ತದೆ. ಲೇಖಕನಾಗಿ ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ ಅದು ಬರವಣಿಗೆಯ ಮೂಲಕ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ತಮ್ಮ ಮೊದಲ ಲೇಖನ ಪ್ರಕಟವಾದ ನಾಡಕೀಯ ಪ್ರಸಂಗ
* ಪತ್ರಿಕೆಗಾಗಿ ಬರೆಯಲಾರಂಭಿಸಿದ ನಾಟಕಗಳು
* ಶ್ರೀಕಂಠಯ್ಯ, ವೆಂಕಣ್ಣಯ್ಯನವರ ಪ್ರೋತ್ಸಾಹ
* ಕೈಲಾಸಂ ದಿನದ ಸಂದರ್ಭದ ಘಟನೆ
* ಗೆಳೆಯರ ಪ್ರೋತ್ಸಾಹ
* ಆಕಾಶವಾಣಿಯಲ್ಲಿನ ಅನಿರೀಕ್ಷಿತವಾಗಿ ಪ್ರಸಾರ ಮಾಡುವ ಭಾಷಣಗಳು

# ನಾನೇಕೆ ಬರೆಯುತ್ತೇನೆ?

**ಶ್ರೀರಂಗ**

ಒಂದು ಅನುಭವವನ್ನು ಇನ್ನೊಬ್ಬರ ದೃಷ್ಟಿಯಿಂದ ನೋಡುವ ಸ್ವಭಾವವನ್ನು ಹೊಂದಿದವರು ಶ್ರೀರಂಗರು ಇವರು ನಾಟಕ ರಂಗಭೂಮಿಗೆ ಹೊಸ ಆಯಾಮವನ್ನು ನೀಡಿ ಹಲವು ಬಗೆಯ ತಂತ್ರಗಳನ್ನು ಅಳವಡಿಸಿಕೊಂಡು ಅನೇಕ ಪ್ರಯೋಗಗಳನ್ನು ಮಾಡಿ ಆಧುನಿಕ ಕನ್ನಡ ರಂಗಭೂಮಿಗೆ ನೂತನ ನೋಟವನ್ನು ನೀಡಿದ ಶ್ರೇಷ್ಠ ನಾಟಕಕಾರರು. ಶ್ರೀರಂಗರಿಗೆ ನಾಟಕ ವಲಯದಲ್ಲಿ ದೊಡ್ಡ ಹೆಸರಿದೆ. ವೈದಿಕ ಕುಟುಂಬದಲ್ಲಿ ಜನಸಿರುವ ಶ್ರೀರಂಗರಿಗೆ ವಿದ್ಯೆ ಪರಂಪರೆಯಿಂದ ದತ್ತವಾಗಿರುತ್ತದೆ. ಬ್ರಿಟಿಷರು ಭಾರತದಲ್ಲಿ ಹೊಸ ಶಿಕ್ಷಣ ಪದ್ಧತಿ ಆರಂಭಿಸಿದಾಗ ಅವರ ಪ್ರಯೋಜನ ಪಡೆದವರಲ್ಲಿ ವೈದಿಕರು ಮುಖ್ಯರು. ಕಾರಣ ಅವರಿಗೆ ಸಾಮಾಜಿಕವಾಗಿ, ಧಾರ್ಮಿಕವಾಗಿ ಸಮಾಜದಲ್ಲಿ ಉನ್ನತ ಸ್ಥಾನ ದತ್ತವಾಗಿರುತ್ತಿತ್ತು. ಮಠಮಾನ್ಯಗಳಲ್ಲಿ ಸಾಂಪ್ರಾದಾಯಿಕ ವಿದ್ಯಾಭ್ಯಾಸ ಪಡೆಯುತ್ತಲೇ ಬಂದಿರುತ್ತಾರೆ. ಹೊಸ ಶಿಕ್ಷಣ ಪದ್ಧತಿಗೆ ಸಹಜನಾಗಿ ಒಲಿದವರು ಇದೇ ಸಮುದಾಯವಾಗಿದೆ.

ಶ್ರೀರಂಗರು ಗಣಿತ ವಿದ್ಯಾರ್ಥಿಯಾಗಿ ಇಂಜಿನಿಯರ್ ಆಗುವ ಉದ್ದೇಶದಿಂದ ವಿದ್ಯಾಭ್ಯಾಸಕ್ಕೆ ನಿಂತವರು. ಆದರೆ ದೈಹಿಕ ಆರೋಗ್ಯ, ಮಾನಸಿಕ ಆರೋಗ್ಯ ಸಹಕರಿಸಿದ ನಿಮಿತ್ತ ಸಂಸ್ಕೃತ ವಿಷಯದ ಕಡೆ ಗಮನ ಹರಿಸಿದರು.[೮] ಅವರ ಜೀವಿತಾವಧಿಯ ಮೊದಲ ಹಂತದಲ್ಲಿ ಆರಂಭದಲ್ಲಿ ನಾಲ್ಕು ವರ್ಷ ಕನ್ನಡ, ೧೩ ವರ್ಷ ಇಂಗ್ಲಿಷ್ ೧೦ ವರ್ಷ ಸಂಸ್ಕೃತ ಓದಿದ್ದರಿಂದ ಕನ್ನಡದಲ್ಲಿ ಸಾಹಿತಿಯಾಗುವ ಕನಸು ಕಂಡವರಲ್ಲ ಆದರೆ ಶ್ರೀರಂಗರು ಕನ್ನಡದಲ್ಲಿ ಸಾಹಿತ್ಯ ರಚಿಸಿ ದೊಡ್ಡ ಹೆಸರು ಮಾಡಿರುವುದು ನಿಜ. ಪ್ರತಿಯೊಬ್ಬ ಬರಹಗಾರನಿಗೆ ತಮ್ಮ ಜೀವಿತಾವಧಿಯಲ್ಲಿ ಹೆಚ್ಚು ಪ್ರಭಾವಕ್ಕೆ ಒಳಗಾಗುವುದು ಬಾಲ್ಯದಲ್ಲಿ ಈ ಪ್ರಭಾವದಿಂದ ಜೀವನದ ದಾರಿಯೇ ಬದಲಾಗುತ್ತದೆ. ಶ್ರೀರಂಗರೇ ಹೇಳುತ್ತಾರೆ. ಹುಟ್ಟಿನಿಂದಲೂ ನನಗೆ ಆಚಾರಗಳ ಬಗ್ಗೆ ಕರಡು ನಂಬಿಕೆಗಳ ಬಗ್ಗೆ ಕುಟುಂಬದಲ್ಲಿ ಸ್ತ್ರೀಯರನ್ನು ನಡೆಸಿಕೊಳ್ಳುವ ಬಗ್ಗೆ ಒಂದು ಅಸಹನೆ ಇದ್ದಿತ್ತು. ಬಾಲ್ಯದಲ್ಲಿ ನೀ ಶೂದ್ರನಾಗಿ ಹುಟ್ಟಬೇಕಾಗಿತ್ತು ಎಂದು ಅಜ್ಜನಿಂದ ಬೈಸಿಕೊಳ್ಳುವ ಮಟ್ಟಿಗೆ ಎಲ್ಲರೊಡನೆ ಬೆರೆಯುತ್ತಿದ್ದೆ. ಉಚ್ಚ ಎನ್ನಿಸಿಕೊಳ್ಳುವ ಬ್ರಾಹಣ ಆಚಾರ್ಯ ಕುಲದಲ್ಲಿ ಹುಟ್ಟಿದ ನಾನು ರೈತರ ಮನೆಯಲ್ಲಿ ಊಟ ಮಾಡಿದರೆ ಅಂದಿನ ಸಮಾಜದಲ್ಲಿ 'ಮಹಾಅನರ್ಥ' ಎನ್ನಿಸುತ್ತಿತ್ತು.[೮] ಇಲ್ಲಿ ಗಮನಿಸಬೇಕಾದದ್ದು ಮನೆಯ ವಾತಾವರಣದಲ್ಲಿಯ ಮಡಿವಂತಿಕೆಗೆ ಮಹತ್ವವಿತ್ತು. ಶ್ರೀರಂಗರು ಇದೇ ನೆರಳಿನಲ್ಲಿ ಬೆಳೆಯ

ಬೇಕಾಗಿತ್ತು ಆದರೆ ಹಾಗೆ ಬೆಳೆಯಲಿಲ್ಲ. ಬದಲಾಗಿ ವಿರುದ್ಧವಾಗಿ ಬೆಳೆಯಲು ಬಯಸಿದಂತೆ ಕಾಣುತ್ತದೆ. ಈ ಸಂಗತಿಯು ಅನೇಕ ದೊಡ್ಡವರ ವಿಷಯದಲ್ಲಿ ನಡೆಯುತ್ತದೆ. ಬ್ರಾಹ್ಮಣನಾಗಿ ಶ್ರೀರಂಗರು ಬೆಳೆಯದೇ ಅದನ್ನು ವಿಚಾರ ಮಾಡಿ ಸರಿ–ತಪ್ಪುಗಳ ಚಿಂತನೆಯಿಂದ ಮಡಿವಂತಿಕೆ ಬಿಡುವ ವಿಚಾರ ಮಾಡುವುದು ಸಹಜವೇ ಆಗಿದೆ. ಎಲ್ಲರ ವಿಚಾರದಲ್ಲಿ ಸಹಜವಲ್ಲ. ಸಾಹಿತಿ, ಕಲಾವಿದರ ವಿಷಯದಲ್ಲಿ ಇದು ಸಹಜ ಯಾಕೆಂದರೆ ಬರಹಗಾರ ಪ್ರಗತಿ ಪರವಾಗಿರುತ್ತಾನೆ. ಜನಪರವಾಗಿರುತ್ತಾನೆ. ಜನಪದ ಎಂದರೆ ಕೆಳವರ್ಗದ ಬಡವರ ಅಸಹಾಯಕರ ಸಾಮಾನ್ಯರ ಪರ ಎಂದೇ ಅರ್ಥ. ಶ್ರೀರಂಗರು ತಮ್ಮ ವೈಚಾರಿಕ ನಿಲುವು ಜನಪರವಾಗಿರುವಂತೆ ನೋಡಿಕೊಂಡಿದ್ದಾರೆ.

ಇಲ್ಲಿ ಗಮನಿಸಬೇಕಾದದ್ದು ಇನ್ನೊಂದು ವಿಷಯವೇಂದರೆ ಶ್ರೀರಂಗರಿಗೆ ಬಾಲ್ಯದಲ್ಲಿ ಇಬ್ಬರು ಅಜ್ಜಂದಿರು ಸಿಗುತ್ತಾರೆ. ಒಬ್ಬ ತಾಯಿಯ ತಂದೆ. ಮಾತಾಮಹಾ, ಇನ್ನೊಬ್ಬ ತಂದೆಯ ತಂದೆ ಪಿತಾಮಹ ಎಲ್ಲರಿಗೂ ಸಿಗುವಂತೆ ಇಬ್ಬರು ಅಜ್ಜಂದಿರ ಪರಿಸರದಲ್ಲಿ ಬೆಳೆಯುತ್ತಾರೆ. ತಾಯಿಯ ತಂದೆಯಾದ ಅಜ್ಜನ ಜೊತೆ ಶ್ರೀರಂಗರು ಹೆಚ್ಚು ಕಾಲ ಕಳೆಯುತ್ತಿದ್ದರು. ತಂದೆಯ ತಂದೆಯಾದ ಅಜ್ಜನು ಜಹಗೀರದಾರನಂತೆ ಶ್ರೀರಂಗರು ಹೇಳುವಂತೆ ಅತ್ಯಂತ ಧರ್ಮನಿಷ್ಠ, ಆಚಾರ ಶೀಲ, ಮಡಿ ಮೈಲಿಗೆ ವೀರನಾಗಿದ್ದರೆ ನನ್ನ ಮಾತಾಮಹನು ಸಾಮಾನ್ಯ ಬ್ರಾಹ್ಮಣನಾಗಿದ್ದರೂ ಮಡಿ ಮೈಲಿಗೆ ಬಗ್ಗೆ ಹೆಚ್ಚು ತಲೆಕೆಡಿಕೊಳ್ಳುತ್ತಿರಲಿಲ್ಲ. ಮಾತಾಮಹಾನು ಸಾಮಾನ್ಯ ವ್ಯಕ್ತಿ ರೈತನೂ ಆಗಿದ್ದ ಹಳ್ಳಿಯಲ್ಲಿದ್ದು ಎಲ್ಲರ ಜೊತೆ ಬೆರೆಯುತ್ತಿದ್ದನು. ಹಳ್ಳಿ ಎಂದರೆ ಸಾಮಾನ್ಯವಾಗಿ ಒಂದು ಕುಟುಂಬದಂತೆ ಹೀಗೆ ಹಳ್ಳಿಯವನಾಗಿದ್ದರಿಂದ ಉರೊಟ್ಟಿಗಿನ ಬದುಕಿನೊಂದಿಗೆ ಬಳಲುತ್ತಿದ್ದರಿಂದ ಶ್ರೀರಂಗರಿಗೆ ಈ ಅಜ್ಜನ ಪ್ರಭಾವವೇ ಹೆಚ್ಚಾಗಿದೆ. ಅದೂ ಬಾಲ್ಯದಲ್ಲಿ ಅಜ್ಜನ ಹೆಗಲ ಮೇಲೆ ಕುಳಿತು ಬಯಲಾಟ, ಜಾತ್ರೆ, ಊರು ಸುತ್ತುತ್ತ ಶ್ರೀರಂಗರು ಮಡಿಮೈಲಿಗೆ ಬಗ್ಗೆ ಆಲೋಚಿಸದೆ ಸಾಮಾನ್ಯರಂತೆ ಬೆರೆಯುವ ಗುಣ ಬೆಳೆದದ್ದು ಅವರ ಸಾಹಿತ್ಯ ರಚನೆಗೆ ನೆರವಾಗಿದೆ. ಹಳ್ಳಿಯ ಜಾತ್ಯತೀತ ವಾತಾವರಣವು ಶ್ರೀರಂಗರ ಮೇಲೆ ಪ್ರಭಾವ ಬೀರಿದೆ.

ಜೊತೆಗೆ ನಾಡಿನಲ್ಲಿ ಸ್ವಾತಂತ್ರ್ಯ ಹೋರಾಟದ ಬಿಸಿ ಹತ್ತಿದಾಗ ಗಾಂಧೀಜಿಯ ಪ್ರವೇಶದಿಂದ ಹೊಸ ಚೈತನ್ಯ ನಾಡಿನಲ್ಲಿ, ಜನರಲ್ಲಿ ತುಂಬಿತ್ತು. ೧೯೩೦ರ ಅಸಹಕಾರ ಚಳುವಳಿ ಮತ್ತು ಗಾಂಧಿ ತತ್ವಗಳ ಜೀವನ ವಿಧಾನವು ಶ್ರೀರಂಗರ ಮೇಲೆ ಪ್ರಭಾವ ಬೀರಿದವು. ಆದರೆ ವೈದಿಕ ಸಮುದಾಯಗಳು ಗಾಂಧೀಜಿ ಅವರ ತತ್ವ, ಆದರ್ಶಗಳಲ್ಲಿ ನಂಬಿಕೆ ಇಡಲಿಲ್ಲ. ವಿರೋಧಿಸುತ್ತಿದ್ದವು. ಶ್ರೀರಂಗರ ವೈದಿಕ ಮನೆತನದಲ್ಲಿ ಗಾಂಧೀಜಿ ಕುರಿತು ಮಾತಾಡುವಂತಿರಲಿಲ್ಲ. ಹೊರಗೆ ಬೇಕಾದಷ್ಟು ಚಳುವಳಿ ಬಿಸಿಯಿತ್ತು. ಮನೆಯಲ್ಲಿ ಇರಲಿಲ್ಲ ಹೀಗಾಗಿ ಶ್ರೀರಂಗರು ಮೌನವಾಗಿರದೇ ಇದೇ ಸಂದರ್ಭದಲ್ಲಿ ಸುಮ್ಮನಿರದೇ ಏನೋ ಬರೆದರು ಅದು ಕೇವಲ

ಇವು ಸ್ವಾತಂತ್ರ್ಯ ಮತ್ತು ಗಾಂಧೀಜಿ ಅವರ ತತ್ವದರ್ಶನಗಳನ್ನು ಕುರಿತು ಬರೆದಿರುವುದು ಗೊತ್ತಾಗುತ್ತದೆ. ಆದರೆ ಶ್ರೀರಂಗರಿಗೆ ಇದನ್ನು ಮುಂದುವರಿಸಲಾಗಲಿಲ್ಲ. ಬರವಣಿಗೆಯನ್ನು ಮುಂದುವರಿಸಲಿಲ್ಲ. ಇದೇ ಸಮಯದಲ್ಲಿ ಶ್ರೀರಂಗರು ಇಂಗ್ಲೆಂಡಿಗೆ ಹೋದರು.

ಶ್ರೀರಂಗರು ಇಂಗ್ಲೆಂಡಿಗೆ ಹೋಗಿ ಅಲ್ಲಿನ ವಾತಾವರಣದ ಮಧ್ಯಮ ವರ್ಗವನ್ನು ವಿದ್ಯಾರ್ಥಿಯಾಗಿ ಅಲ್ಲಿಯ ಶಿಕ್ಷಕರನ್ನು ಅವರ ಜೀವನದೊಡನೆ ಬೆರೆತುದಕ್ಕೆ 'ಬಾರ್'ನಲ್ಲಿ ಸಂಕೀರ್ಣ ವ್ಯಕ್ತಿಗಳನ್ನು ನೋಡಿ ಚಕಿತನಾದೆ. ಭಾರತದಲ್ಲಿ ದೊರೆಯಂತೆ ವರ್ತಿಸುವ ಬ್ರಿಟಿಷನು ತನ್ನ ದೇಶದಲ್ಲಿ ಸಾಮಾನ್ಯನಂತೆ ತಾನೂ ಎಲ್ಲರಷ್ಟೆ ಎಂದು ವರ್ತಿಸುತ್ತಿದ್ದನು. ಹಾಗೂ ಕುಟುಂಬದಲ್ಲಿ ಅಂಥ ಶ್ರದ್ಧೆಯಿಲ್ಲ, ವರ್ತನಿಯಮಗಳಿಲ್ಲ. ಮಡಿ ಮೈಲಿಗೆಯಲ್ಲಿ ಸಮಾಜದಲ್ಲಿ ಅಸ್ಪೃಶ್ಯತೆ ಇಲ್ಲ. ನನ್ನ ದೇಶದ ಜನರೂ ತಾವೆಲ್ಲರೂ ಒಂದು ಸಮಾಜ ಎಂದು ತಿಳಿಯಬೇಕು. ಹೆಂಗಸರನ್ನು ಬರೀ ಕಾಮದ ಗೊಂಬೆ ಎಂದು ನಡೆಸಿಕೊಳ್ಳಬಾರದು ಎಂದು ಮುಂತಾಗಿ ವಿಚಾರಮಾಡಿ ಸ್ವದೇಶಕ್ಕೆ ಮರಳಿದ ಮೇಲೆ ಇದನ್ನು ಮಾಡತಕ್ಕದ್ದು ಎಂದು ನಿರ್ಣಯಿಸಿದೆ. ಶ್ರೀರಂಗ ವೈದಿಕನಾಗಿದ್ದು ಆದರೆ ಬಾಲ್ಯದ ವಾತಾವರಣದಲ್ಲಿ ಅದನ್ನು ಮೀರಿದ್ದರಿಂದಲೂ ಅತ್ತ-ಇತ್ತರ ನಡುವೆ ಇದ್ದಾಗ, ಇಂಗ್ಲೆಂಡಿನ ವಾತಾವರಣಕ್ಕೆ ಶ್ರೀರಂಗರು ಒಲಿದರು. ಅವರು ವೈಚಾರಿಕತೆ ಮತ್ತು 'ಮುಕ್ತ'ತೆಗೆ ಮಹತ್ವ ನೀಡಿದರು. ಇದನ್ನು ಮೈಗೂಡಿಸಿಕೊಳ್ಳುದೆಂದರೆ ಮೊದಲ ವಿಚಾರ ಮಾಡುವುದು ನಂತರ ಆಚರಣೆಗೆ ತರುವುದೇ ಆಗಿತ್ತು ಮೇಲಾಗಿ ತಮ್ಮ ರಚನೆಗಳಲ್ಲಿ ಇದನ್ನು ವಿಸ್ತರಿಸುವುದಾಗಿತ್ತು. ಆದರೆ ಇಂಗ್ಲೆಂಡಿನಿಂದ ಬಂದ ಮೇಲೆ ಇಲ್ಲಿ ಪರಿಸ್ಥಿತಿ ಬೇರೆಯದೇ ಎದುರಾಯಿತು. ವೈದಿಕನಾಗಿ ಸಮುದ್ರ ದಾಟಬಾರದು. ದಾಟಿದರೆ ಬಹಿಷ್ಕಾರಕ್ಕೆ ಒಳಗಾಗಬೇಕು ಈ ಸವಾಲಿನಂತೆ ಶ್ರೀರಂಗರು ಅಸಹಾಯಕರಾದರು. ಸ್ವಕುಟುಂಬಗಳಲ್ಲಿ ಮದುವೆಗೆ ಅವಕಾಶವಿಲ್ಲ. ಇಲ್ಲಿಯ ಪರಿಸ್ಥಿತಿ, ವಾತಾವರಣ ಸುಧಾರಿಸಲೇಬೇಕು. ಎಂದು ತೀರ್ಮಾನಿಸಿ ಶ್ರೀರಂಗರು ಒಂಟಿಯಾಗಿ ತಮ್ಮ ಪರಿಸ್ಥಿತಿಯನ್ನು ಆಲೋಚಿಸುತ್ತಾ ತಲ್ಲಣಗೊಂಡರು. ಸಂಪ್ರದಾಯ ಮತ್ತು ವೈಚಾರಿಕತೆಗಳಲ್ಲಿ ಯಾವುದನ್ನು ಸ್ವೀಕರಿಸಬೇಕು? ಈ ಎರಡರ ವಕೀಲನಾಗಿ ಬಾದಿಸುತ್ತಾ ದ್ವಂದ್ವ ವ್ಯಕ್ತಿತ್ವವನ್ನು ಬೆಳೆಸಿಕೊಂಡರು. ಇದು ನಾಯಕ ರಚನೆಗೆ ಮಹತ್ವದ ದಾರಿಯಾಗಿ ಪರಿಣಮಿಸಿತು. ಅದೇ "ಉದರ ವೈರಾಗ್ಯ" ಬರೆದರು. ಬಹಿಷ್ಕಾರ ಹಾಕಿದ ಮತ್ತು ಹಾಕಿಸಿದ ಎಲ್ಲ ಬ್ರಾಹ್ಮಣರ ವ್ಯಂಗ್ಯ ಚಿತ್ರವನ್ನು ತೋರಿಸಿದರು. "ಮುಕ್ಕಣ್ಣ ವೀಟಪುರುಷ" ಇದರಲ್ಲಿ ಬ್ರಾಹ್ಮಣ ಯುವಕನು ಶೂದ್ರ ಹುಡುಗಿಯನ್ನು ಮದುವೆಯಾಗುವ ಇಲ್ಲಿಯ ಪದ್ಧತಿಗೆ, ಸಮಾಜಕ್ಕೆ ಮೇಲು-ಕೀಳು ಎನ್ನುವ ಜಾತಿಗೆ ಬಲವಾದ ಪೆಟ್ಟನ್ನು ನೀಡಿದರು. "ಅಧಿಕ ಮಾಸ"" ನಾಟಕದಲ್ಲಿ ಮದುವೆಯಾಗದೆ ಗರ್ಭಿಣಿಯಾಗುವ ಹುಡುಗಿಯ ಸ್ಥಿತಿ ಒಟ್ಟಿನಲ್ಲಿ ಇದು ಇಂಗ್ಲೆಂಡಿನಲ್ಲಿ ನೋಡಿದ್ದ ಕೆಲವು ಅಂಶಗಳು ಪೂರಕವಾದವು. ಬರೆಯಲು ಹಾಗೂ ಸಾಸನೂರು ಹಾಗೂ ಅನೇಕ ಗೆಳೆಯರು ಹಾಗೂ ನಾಟಕಕಾರರು ತರುಣ ಕನ್ನಡ ಅಭಿಮಾನಿಗಳು ಸ್ವತಂತ್ರ

ಕನ್ನಡದ ನಾಟಕವ ಶೋಧನೆಯಲ್ಲಿ ತೊಡಗಿದಾಗ ಹೇಗೋ ಇವರ ಹೆಸರು ತಿಳಿದೋ ಅಥವಾ ಬರೆದ ಬರಹವನ್ನು ಓದಿಯೋ? ಬರೆದ ನಾಟಕದ ಪ್ರತಿ ಕೇಳಿದರು ಇವರು ನಾಟಕ ಬರೆದಿಲ್ಲ. ಖಾಸಗಿ ದಿನಚರಿ ಎಂದೆ ಹಠದಿಂದ ಒಂದನ್ನು ಹುಡುಕಿಕೊಂಡು ಒಯ್ದು ಅದು ನಾಟಕ ಎಂದೆ ನಿಶ್ಚಯಿಸಿದರು. ಆಗ ಶ್ರೀರಂಗರಿಗೆ ಈ ಪ್ರಸಂಗ ಇನ್ನೂ ಹೆಚ್ಚಿನ ಮಟ್ಟದಲ್ಲಿ ಬರೆಯಲು ಪ್ರೇರೆಪಿಸಿತು. ವಿವಿಧ ರೀತಿಯ ಬರಹಕ್ಕೆ ಕೈ ಹಾಕಿದರು. ಸಾಸನೂರು ಮೊದಲಾದ ನಾಟಕಕಾರರು ಇವರನ್ನು ಹುರಿದುಂಬಿಸಿ, ಪ್ರೋತ್ಸಾಹಿಸಿ, ವೈದ್ಯರಾಜ, ದರಿದ್ರ ನಾರಾಯಣ ಬೆರೆಸಿದರು ಅದರಂತೆ ೧೬ನೇ ವಯಸ್ಸಿನ ಒಬ್ಬ ಯುವತಿ ೩ನೇ ಮಗುವಿನ ಹೆರಿಗೆಯ ಕಾಲದಲ್ಲಿ ಸತ್ತು ಹೋದಳು. ಅಂದರೆ ಈ ಘಟನೆ ಬಾಲ್ಯ ವಿವಾಹ ವಿಷೇಧ ಕ್ರೂರ ಪದ್ಧತಿಯನ್ನು ಖಂಡಿಸಲು ತನ್ನ ತಾಯಿಯೂ ತನ್ನ ೩೧ನೇ ವಯಸ್ಸಿಗೆ ಸತ್ತಿದ್ದನ್ನು ನೆನಪಿಸಿಕೊಂಡು ೬–೭ ಮಕ್ಕಳನ್ನು ಹೆತ್ತಿದ್ದು, ಅವರಲ್ಲಿ ೫ ಜನ ಸತ್ತಿರುವುದು ಈ ವಿಚಾರಗಳ ಸಂಘರ್ಷದ ಪರಿಣಾಮವಾಗಿ 'ಸಂಸಾರಿಗ ಕಂಸ' ಬರೆದವರು ಮಕ್ಕಳು ದೇವರು ಕೊಟ್ಟ ಕೊಡುಗೆ ಎಂದು ಹಾಗೆಯೇ ಮಕ್ಕಳನ್ನು ಪ್ರತಿವರ್ಷದಂತೆ ಹೇರುತ್ತಿದ್ದರು ಇದರಿಂದ ಬಹಳಷ್ಟು ಜನರು ಸಾವನ್ನು ಅಪ್ಪುತ್ತಿದ್ದರು. ಹಾಗಾಗಿ ಅವರಿಗೆ ತಿಳಿಸಿ ನಿಯಂತ್ರಣ (ಸಂತತಿ) ಬಗ್ಗೆ ಬರೆದವರು.[೯]

ಗಾಂಧೀಜಿಯವರು ಅಮರಣಾಂತರ ಉಪವಾಸವೆ ಕೈಗೊಂಡಿದ್ದರು. ಅದರ ಪರಿಣಾಮವಾಗಿ ಅಖಿಲ ಭಾರತ ಹರಿಜನ ಸೇವಕ ಸಂಘ ಸ್ಥಾಪಕವಾಯಿತು. ಈ ಅವಕಾಶವನ್ನು ಉಪಯೋಗಿಸಿಕೊಂಡು ರಾಜಕೀಯ ಮುಂದಾಳು (ಬ್ರಾಹ್ಮಣರಾಗಿದ್ದರು)ಗಳನ್ನು ರೂಢಿಸಿಕೊಂಡು ಗಾಂಧೀಜಿ ಅನುಯಾಯಿಗಳನ್ನಿಸಿಕೊಂಡರೂ ಬ್ರಾಹ್ಮಣರಾದುದಕ್ಕೆ ಹರಿಜನ ಸ್ಪರ್ಶದ ನಂತರ ಸ್ನಾನದಿಂದಲೇ ಶುಚಿ ಎಂದು ಆಚರಿಸುವ ರಾಜಕೀಯ ಮುಂದಾಳುಗಳನ್ನು ನೋಡಿ ಇಂಥವರನ್ನು ಬಯಲಗೆಳೆಯಲು "ಹರಿಜನ್ವಾರ"[೧೦] ಎಂಬ ನಾಟಕ ಬರೆದೆ ಎಂದು ತಾವೇ ಹೇಳಿಕೊಳ್ಳತ್ತಾರೆ. ಅಂದರೆ ಮೂಡ ನಂಬಿಕೆ, ಆಚರಣೆಗಳು, ಬ್ರಾಹ್ಮಣರು, ಮೇಲು ಕೀಳು ಎಂಬ ಅಂಶವನ್ನು ಸಮಾನ ಎಂದು ತೋರಿಸಲು ಹಾಗೂ ಹರಿಜನರೆ ಶ್ರೇಷ್ಠರು. ಅವರ ಸ್ನಾನದಿಂದಲೇ ಶುಚಿ ಎನ್ನುವರು ಅವರ ಸ್ಪರ್ಶದಿಂದಲೇ ಪವಿತ್ರ ಎನ್ನುವ ರೀತಿಯಲ್ಲಿ ಹರಿಜನರು ಎಂಬ ನಾಟಕ ಬರೆದರು. ಹಾಗೆಯೇ ಮತ್ತೊಂದು ಅಂಶ ವ್ಯಕ್ತಪಡಿಸುತ್ತಾರೆ. ಅವಿಭಕ್ತ ಕುಟುಂಬದ ಕಟು ಅನುಭವವನ್ನು ಉಂಡ ಇವರು ಅದರೆಲ್ಲಾ ಮರ್ಮವನ್ನು ತಿಳಿ ಹಂದರವನ್ನು ಹೊರಹಾಕಲು 'ಪಾಣಿಪತ್ತು' ಬರೆದಾಗ ಇತರರು ಬ್ರಾಹಣೇತರರು ಪ್ರತಿಭಟಿಸಿದರು ಎಂದು ಹೇಳುತ್ತಾರೆ. ಅಂದರೆ ಈ ಶೀರ್ಷಿಕೆಯೇ ಪಾಣಿಪತ್ ಕದನ ಇರುವ ತರ ಬ್ರಾಹ್ಮಣರ ಮೈಲಿಗೆ ಆಚಾರಗಳು ಅಲ್ಲಿಯ ಪದ್ಧತಿಯ ವ್ಯವಸ್ಥೆ ಒಳಗೊಂಡಿರಬೇಕು. ಹಾಗಾಗಿ ಅದನ್ನು ನಿರಾಕರಿಸಿದರು. ಅದು ಸಫಲತೆ ಹೊಂದಿತು.

ಮುಂದೆ ಗಾಂಧೀಜಿಯವರ ಸರ್ವೋದಯ, ಸ್ವರಾಜ್ಯದ ಕಲ್ಪನೆಗಳ ಆಧಾರದಲ್ಲಿ ನಾಟಕ

ರಚನೆಗೆ ತೊಡಗಿದರು. ಸಾಹಿತ್ಯ ರಚನೆಗೆ ವಾತಾವರಣ ಪೂರಕವಾಗಿರಬೇಕೋ? ಮಾರಕವಾಗಬೇಕೋ? ಅಂದರೆ ಇಲ್ಲಿ ಬಾಲ್ಯದಿಂದ ಶ್ರೀರಂಗರ ಮನೆಯ ವಾತಾವರಣ ಸಂಪ್ರದಾಯಿಕವಾಗಿತ್ತು.

ಆದರೆ ಶ್ರೀರಂಗರು ಇದಕ್ಕೆ ವಿರುದ್ಧವಾಗಿ ಇರಲು ಬೆಳೆಯಲು ಆಲೋಚಿಸಿದರು ಗಾಂಧೀಜಿ ಅವರ ವಿಚಾರಗಳು ಶ್ರೀರಂಗರಿಗೆ ಹತ್ತಿರವಾದವು. ಆಗಲೂ ಅವುಗಳ ಅಭಿವ್ಯಕ್ತಿಗೆ ಅವಕಾಶಗಳು ಸುಲಭವಾಗಿರಲಿಲ್ಲ. ಇಂಗ್ಲೆಂಡಿಗೆ ಹೋಗಿ ಬಂದರು ಅವರ ಒಳಗಿನ ವೈಚಾರಿಕತೆಗೆ ಪರದೇಶದಲ್ಲಿ ಪೂರಕ ಅವಕಾಶ ಸಿಕ್ಕಿತು.[೧೦] ಭಾರತಕ್ಕೆ ಬಂದರೆ ವಿರುದ್ಧವಾಯಿತು. ಆದರೂ ಪರಿಸ್ಥಿತಿಯನ್ನು ಎದುರಿಸಿ ಬರೆದರು ಇದೇ ಲೇಖಕನನ್ನು ರೂಪಿಸುವ ಸಂದರ್ಭ ಎಂದು ತಿಳಿಯಬೇಕು. ಮುಂದೆ ಶ್ರೀರಂಗರು ಬರೆದ ನಾಟಕ ಮತ್ತು ಕಾದಂಬರಿಗಳಿಗೆ ಪ್ರಭಾವ ಪ್ರೇರಣೆಯನ್ನು ಸ್ವಾತಂತ್ರ್ಯ ಚಳುವಳಿಯಿಂದ ಗಾಂಧೀಜಿ ಅವರ ಕ್ರಿಯಾಶೀಲ ತತ್ವಗಳಿಂದ ಪಡೆದರು. ಸ್ವತಃ ಶ್ರೀರಂಗರು ತಮ್ಮ ಆದರ್ಶಗಳ ನೆಲೆಯಲ್ಲಿ ಚಳುವಳಿಗೆ ತೊಡಗಿದರು. ಅದಕ್ಕೆ ಗಾಂಧೀಜಿ ಅವರೇ ಕಾರಣರಾಗಿದ್ದರು.

**ಲೇಖನದಲ್ಲಿ ಕಂಡು ಬರುವ ಪ್ರಮುಖಾಂಶಗಳು**

- ಹುಟ್ಟಿನಿಂದಲೂ ಅವರಿಗೆ ಆಚಾರಗಳ ಬಗ್ಗೆ ಕುರುಡು ನಂಬಿಕೆಗಳ ಬಗ್ಗೆ, ಕುಟುಂಬದಲ್ಲಿ ಸ್ತ್ರೀಯರನ್ನು ನಡೆಸಿಕೊಳ್ಳುವ ಬಗೆಯ ಅಸಹನೆ
- ಸಂಸ್ಕೃತದ ಓದಿನ ಬಲ
- ಮಹಾತ್ಮ ಗಾಂಧೀಜಿಯವರ ಅಸಹಕಾರ ಚಳುವಳಿ
- ಇಂಗ್ಲೆಂಡಿಗೆ ಹೋದುದರ ಪ್ರಭಾವ ಹಾಗೂ ಅಲ್ಲಿನ ಪರಿಸರ
- ಸಮುದ್ರಯಾನ ಮಾಡಿದಕ್ಕೆ ಬಹಿಷ್ಕಾರ ಹಾಗೂ ಉಪವಾಸದಲ್ಲಿ ಕಾಲ ಕಳೆದ ಪ್ರಸಂಗ
- ಈ ಸಮಾಜವನ್ನು ಸುಧಾರಿಸಲೇ ಬೇಕು?
- ಸಂಪ್ರದಾಯವನ್ನು ಕಿತ್ತು ಒಗೆಯಬೇಕೆಂಬ ಅಂಶ
- ಹೋಟೆಲ್ ಕೋಣೆಯಲ್ಲಿ ತಮ್ಮ ಮನದಾಳದ ನಡುವೆ ನಡೆದ ಮಾತಿನ ದ್ವಂದ್ವ ಯುದ್ಧವನ್ನು ದಿನಚರಿಯಂತೆ ಬರೆದಿಡಬೇಕೆಂಬ ಪ್ರಯತ್ನ
- ಸ್ವಾತಂತ್ರ್ಯೋತ್ತರದ ಕೆಲವು ಘಟನೆಗಳು
- ಸಾಸನೂರು ಮೊದಲಾದವರು ಮತ್ತು ನಾಟಕಕಾರರು
- ಇವರ ಜೀವನದಲ್ಲಿ ಒಂದೇ ಒಂದು ಸಲ ಮಹಾತ್ಮರನ್ನು ಸಂದರ್ಶಿಸಿದ್ದು
- ಬಾಲ್ಯ ವಿವಾಹ ನಿಷೇಧ ಕ್ರೂರಪದ್ಧತಿ
- ಸಂತತಿ ನಿಯಂತ್ರಣದ ಬಗ್ಗೆ
- ಅವಿಭಕ್ತ ಕುಟುಂಬದ ಕಹು ಅನುಭವಗಳು

# ನಾನು ಮತ್ತು ನನ್ನ ಸಾಹಿತ್ಯ

**ಪು.ತಿ. ನರಸಿಂಹಾಚಾರ್**

ಆಧುನಿಕ ಕನ್ನಡ ಸಾಹಿತ್ಯದ, ಅದರಲ್ಲೂ ನವೋದಯ ಕಾವ್ಯದ ವಿಭಿನ್ನ ಸಾಧಕರಲ್ಲಿ ಒಬ್ಬರಾದ ಶ್ರೀ ಪು.ತಿ. ನರಸಿಂಹಾಚಾರ್ ಅವರು ಭಾಗವತ ಕವಿ ಎಂಬ ಅಭಿದಾನಕ್ಕೆ ಪಾತ್ರರಾದವರು. ಸಂಗೀತವನ್ನು ಚೆನ್ನಾಗಿ ಬಲ್ಲ ಅವರ ಅದೆಷ್ಟೋ ಕವಿತೆಗಳು ಗೇಯ ಗುಣಗಳನ್ನು ಚೆನ್ನಾಗಿ ಮೈಗೂಡಿಸಿಕೊಂಡಿವೆ. ಕವಿತೆಯ ಹಿಂದಿನ ಪ್ರೇರಣೆಗಳಾದ ವೈಚಾರಿಕತೆ ಮತ್ತು ಭಾವ ನಿರ್ಭರತೆಗಳ ಸುಂದರ ಸಂಯೋಜನೆಯ ಪ್ರಮುಖವಾಗಿದೆ. ಈ ಲೇಖನದಲ್ಲಿ ತಾವು ಹಾಗೂ ತಮ್ಮ ಸಾಹಿತ್ಯದ ಅವಲೋಕನ ಹಾಗೂ ಯಾಕೆ ತಾವು ಕಾವ್ಯ ರಚಿಸುತ್ತಾರೆ. ಕಾವ್ಯಕ್ಕೆ ಪ್ರೇರಣೆ ಪ್ರಭಾವಗಳು ತಿಳಿಸಿರುವುದ ಕಂಡುಬರುತ್ತದೆ. ಪ್ರಮುಖವಾಗಿ ಅವರು ಒಬ್ಬ ಮನುಷ್ಯ ಹಾಡು, ಕವಿತೆ, ಕತೆ, ನಾಟಕಗಳನ್ನು ಹೇಗೆ ಬರೆಯಲು ಮನಸ್ಸು ಮಾಡುತ್ತಾನೆ. ಮತ್ತು ಆ ಕೆಲಸದಲ್ಲಿ ತೊಡಗುತ್ತಾನೆ. ಈ ಪ್ರೇರಣೆಗಳು ಆತನಿಗೆ ಯಾವ ಗಳಿಗೆಯಲ್ಲಿ ಒದಗುತ್ತವೆ. ಯಾವ ಸಂದರ್ಭಗಳಲ್ಲಿ? ಎಂದಾಗೂ, ಆತನು ಪಡುವ ಅನುಭವ ದಿನದಿಂದ ಎನ್ನಬಹುದು ಎಂದು ಹೇಳುತ್ತಾರೆ. ಅದರ ಹಾಗೆಯೇ ಕವಿತೆಗೋ, ಗೀತೆಗೋ ಅನುಭವಿಸಿದ ಕ್ಷಣಗಳು ಆಕರವಾಗುತ್ತವೆ. ಹಾಗೂ ಕವಿಯು ಪಡುವ ಲೋಕಾನುಭೂತಿಗಳು ಅದರಿಂದ ಉಂಟಾಗುವ ವಿಚಾರ ಸರಣಿಗಳು ತಾತ್ವಿಕ ಚಿಂತನೆಗಳು ಸೂಕ್ಷ್ಮ ಸಂವೇದನೆಗಳು ತಮ್ಮ ಕಾವ್ಯಕ್ಕೆ ಪ್ರೇರಣೆಯಾಗುತ್ತವೆ ಎನ್ನುತ್ತಾರೆ. ಅಂದರೆ ಲೋಕದಿಂದ ಪಡೆದ ಅನುಭವಗಳು ಒಂದರ ನಂತರ ಒಂದು ವಿಚಾರ ಸರಣಿಗಳು ತಮ್ಮ ಮನದಲ್ಲಿನ ಸೂಕ್ಷ್ಮ ತುಡಿತಗಳು ಒಂದರ ಕುರಿತಾದನಿರ್ದಿಷ್ಟವಾದ ಯೋಚನೆಗಳು ಪ್ರಮುಖವಾಗಿ ಮೂಲ ಸಾಮಗ್ರಿಯಂತೆ ಕಾವ್ಯ ರಚಿಸುವುದಕ್ಕೆ ಇವು ತಳಹದಿಗಳು ಇವುಗಳನ್ನು ಹೊರಹಾಕಲು ಕಾವ್ಯ ಬಳಸಿಕೊಂಡರು.

"ನಾನು ಮತ್ತು ನನ್ನ ಸಾಹಿತ್ಯ" ಲೇಖನ ಓದುತ್ತಾ ಹೋದಾಗ ಅವರು ಸ್ಪಷ್ಟವಾಗಿ ನನಗೊದಗಿಬರುವ ಈ ಲೋಕದ ಚಿತ್ತಾನುಭೂತಿಗಳ ಹೊರೆಯನ್ನು ಕಳೆದು ಕೊಳ್ಳುವುದಕ್ಕಾಗಿಯೇ ನಾನು ಕವಿತಾ ಪ್ರವೃತನಾಗುವುದು ಹಾಗೂ ಚಿತ್ತಾನುಭೂತಿಗಳ ಗಾಢ ಸಂವೇದನೆ ಇವುಗಳನ್ನು ಆದಷ್ಟು ಎಚ್ಚರಿಕೆಯಿಂದ ಶಬ್ದಗಳ ಮೂಲಕ ಹೊರಗೆಡಹುವ ಲವಲವಿಕೆ. ಇವು ಇವರ ಕಾವ್ಯ ವ್ಯೂತ್ಪತ್ತಿಗೆ ಮೂಲ ಪ್ರೇರಣೆ[1] ಎಂದು ತಾವೇ ಹೇಳುವಂತೆ ಇಲ್ಲಿ ತಮ್ಮಲ್ಲಿ ಆಲೋಚನೆಯಿಂದ ಹುಟ್ಟಿದ ಲೋಕದ ಕುರಿತಾದ ಅನುಭವಗಳು ಆಧ್ಯಾತ್ಮ ಪರಿಸರ, ನಿಸರ್ಗ ಇಹಪರ ಇವುಗಳನ್ನು ಕುರಿತು ಹೊರಹಾಕಲು ಕಾವ್ಯ ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡರು. ಒಂದು ಗದ್ಯದ ಸಾರಂಶವನ್ನು ಓದಿ ತಿಳಿದುಕೊಳ್ಳಬಹುದು ಆದರೆ ಪದ್ಯದ

ಸಾರಾಂಶ ಬಹಳ ಕಠಿಣ ಅವು ಕಿರಿದರಲ್ಲಿ ಹಿರಿದನ್ನು ಹಿಡಿದಿಟ್ಟಿರುತ್ತಾರೆ ಅಂತಃಕರಣದ ಪ್ರಕ್ರಿಯೆಯ ಅಂಶಗಳೆಲ್ಲ ಒಂದು ಭಾವನೆಗಳ ಬಂಧನದಲ್ಲಿ ಸೆರೆಹಿಡಿದಿಡುತ್ತಾರೆ ಅದರ ಜೊತೆಗೆ ಒಂದು ಸಿದ್ಧಾಂತಗಳ ನಿಲುವು ಅದರ ತುಂಬಿಟ್ಟು ಬರೆದಿರುತ್ತಾರೆ. ಇವುಗಳನ್ನು ಓದುತ್ತಾ ಹೋದ ಹಾಗೆ ಕವಿತೆ ಒಂದು ಹುಚ್ಚು ಮನಸ್ಸಿನ ಮಾಟ ಇದ್ದಹಾಗೆ ಕಂಡುಬರುತ್ತದೆ. ಈ ಹುಚ್ಚಿನ ತುಸು ಅಂಶವಿಲ್ಲದೆ ಸಹೃದಯನೂ ಅದನ್ನು ಅರಿತುಕೊಳ್ಳಲಾರ ಭೌದ್ಧಿಕ ವಿಚಾರದ ಯಜಮಾನಿಕೆಯಿಂದ ತಪ್ಪಿಸಿಕೊಂಡು ಸ್ವಲ್ಪಹೊತ್ತು ಹಾಯಾಗಿರೋಣ ಎಂಬುವವರೀಗೀಗ ಕವಿತೆ ಹಾಗೂ ಕಲೆಯ ರಸ ಸ್ವಾದ ಲಭ್ಯವಾಗುತ್ತದೆ.[೨] ಹೀಗಾಗಿ ಇವರು ಕವಿತೆ ಬರೆದರು. ಲೇಖನ ಓದುವಾಗ ಕವಿ ಇಲ್ಲಿ ವ್ಯುತ್ಪತ್ತಿ ಅಭ್ಯಸ ಪರಿಶ್ರಮ ಇವುಗಳ ಮೂಲಕ ತಮ್ಮ ಕೃತಿಗಳನ್ನು ಬರವಣಿಗೆಯನ್ನು ಹೊರಹಾಕಿದ್ದಾರೆ ಯಾವುದೆ ಒಬ್ಬ ವ್ಯಕ್ತಿಗೆ ಅಭ್ಯಸ ಪರಿಶ್ರಮ ಇವು ಒಬ್ಬ ಉತ್ತಮ ಸಹೃದಯನನ್ನು ನಿರ್ಮಿಸುವುದರ ಜೊತೆಗೆ ಅತ್ಯುತಮ ಬರಹಗಾರನನ್ನು ನಿರ್ಮಿಸುತ್ತದೆ. ಹಾಗೆಯೇ ಕವಿಯೇ ಹೇಳುವಂತೆ "ದೈವಶಕ್ತಿಯ ಪ್ರಭಾವ" ನನ್ನನ್ನು ಬರೆಯಲು ಪ್ರೇರಿಸುತ್ತದೆ ಎನ್ನುವಾಗ ತಮ್ಮಲ್ಲಿರು ಭಾವನೆಗಳು ಹಾಗೂ ರಸಜಾಗರದ ಕ್ಷಣಗಳು ದೈವಶಕ್ತಿ ಇದ್ದಹಾಗೆ ಹಾಗಾಗಿ ಇವರಿಗೆ ದೈವತ್ವದ ಪ್ರೇರಣೆಗೆ ಮೊರೆ ಹೋಗುತ್ತಾರೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಅನುಭವಿಸಿದ ಕ್ಷಣಗಳು
* ಕವಿಯು ಪಡುವ ಲೋಕಾನುಭುತಿಗಳು
* ವಿಚಾರ ಸರಣಿಗಳು ತಾತ್ವಿಕ ಚಿಂತನೆಗಳು ಸೂಕ್ಷ್ಮ ಸಂವೇದನೆಗಳು
* ಲೋಕದ ಚಿತ್ತಾನುಭೂತಿಗಳು
* ವ್ಯುತ್ಪತ್ತಿ ಅಭ್ಯಾಸ ಪರಿಶ್ರಮ
* ದೈವಶಕ್ತಿಯ ಪ್ರಭಾವಗಳು

ಈ ಲೇಖನದಲ್ಲಿ ಪ್ರಮುಖವಾಗಿ ತಾವು ಹಾಗೂ ತಮ್ಮ ಸಾಹಿತ್ಯದ ಅನುಭವಗಳು ಹೊರಹಾಕುವುದಕ್ಕಾಗಿ ಮತ್ತು ಈ ಮೇಲಿ ಅಂಶಗಳ ಮೂಲಕ ಸಾಹಿತ್ಯ ಕೃಷಿ ಆರಂಭಿಸಿರುವುದು ಕಾಣುತ್ತೇವೆ.

# ನಾನೇಕೆ ಬರೆಯುತ್ತೇನೆ?

**ಡಾ. ಸಿದ್ಧಯ್ಯ ಪುರಾಣಿಕ**

ಕಾವ್ಯಾನಂದರು ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಸಿದ್ಧಯ್ಯ ಪುರಾಣಿಕರು ಹೈದ್ರಾಬಾದ್ ಕರ್ನಾಟಕದ ಪ್ರಮುಖ ಕವಿ ಈ ಭಾಗದಿಂದ ಹೊರ ಹೊಮ್ಮಿದ ಅತ್ಯಂತ ಪ್ರತಿಭಾವಂತ ಹಾಗೂ ಸಂವೇದನಾ ಶೀಲ ಬರಹಗಾರ ಇವರ ಕವಿತೆಗಳು ನವೋದಯದ ಎಲ್ಲ ಲಕ್ಷಣಗಳನ್ನು ಹೊಂದಿವೆ. ಇವರು 'ನಾನೇಕೆ ಬರೆಯುತ್ತೇನೆ' ಪ್ರಸ್ತುತ ಲೇಖನದಲ್ಲಿ ಇಡಿ ತಮ್ಮ ಕಾವ್ಯಕ್ಕೆ ಪ್ರೇರಣೆ. ಪ್ರಭಾವದ ಅಂಶಗಳನ್ನು ಯಾವ ರೀತಿ ಒದಗಿ ಬಂದವು ಹಾಗೂ ತಮ್ಮ ಈ ಕ್ಷೇತ್ರಕ್ಕೆ ತೊಡಗಿಸಿಕೊಳ್ಳಲು ಕೆಲವೊಂದು ಅಂಶಗಳನ್ನು ವ್ಯಕ್ತಪಡಿಸುವುದು ಕಾಣುತ್ತವೆ.

ಲೇಖನದ ಪ್ರಾರಂಭದಲ್ಲಿ ಅವರು ತಮ್ಮ ಬರವಣಿಗೆಯಷ್ಟೇ ಅಲ್ಲ ಇಡೀ ಬರಹಗಾರನ ಕುರಿತ ಪ್ರೇರಣೆ ಅಂಶಗಳನ್ನು ವ್ಯಕ್ತಪಡಿಸುತ್ತಾರೆ ಸಾಮಾನ್ಯ ಅಂಶಗಳಿಂದ. ಹೇಗೆಂದರೆ ತಿನಿಸು ತಿನ್ನುವವನಿಗೆ ನಾಲಿಗೆ ತೀಟೆ ತೀರುವವರೆಗೂ ತಿಂದರೂ ಮತ್ತೆ ತಿನಿಸು ತಿನ್ನಲು ಅಪೇಕ್ಷಿಸುವಂತೆ ಬರೆಯುವವನಿಗೆ ಬರವಣಿಗೆಯ ತೀಟೆ ತೀರುವುದಿಲ್ಲ ಹಾಗೆಯೇ ಬರೆಯುತ್ತಿರುತ್ತಾನೆ. ಯಾಕೆಂದರೆ ಈ ಲೋಕದಲ್ಲಿ, ಕಾಣುವ, ವಿಚಾರಗಳು, ಆಚಾರಗಳು, ರೂಡಿ, ಸಂಪ್ರದಾಯಗಳು ಹಾಗೆಯೇ ಧಾರ್ಮಿಕ ಅಂಶಗಳು ಪೂಜೆ, ದ್ಯಾನ ಇವುಗಳ ಮೂಲಕ ಬರವಣಿಗೆ ರಚಿಸುವುದು, ನರಸುತ್ತಿಮಾಡದೆ ಹರಸುತ್ತಿ ಮಾಡಿ, ಮುಕ್ತಿ ಪಡೆಯುವ ಹಂಬಲವಾಗಿರಬಹುದು ಭಕ್ತಿಯ ಉದ್ರೇಕವಾಗಿರಬಹುದು. ತನ್ನ ದೇಶದ ಗತವೈಭವವನ್ನು ವರ್ಣಿಸುವ ದೇಶಾಭಿಮಾನವಾಗಿರಬಹುದು. ಸ್ವಾತಂತ್ರ್ಯ ಲಾಲಸೆಬಂಧ ವಿಮೋಚನೆಯ ಪಿಪಾಸೆಯಾಗಿರಬಹುದು. ಸತ್ಯದ ಶೋಧನೆ, ಜೀವನದ ವಿಮರ್ಶೆ, ವಿಶ್ಲೇಷಣೆಯ ಆಸಕ್ತಿಯಾಗಿರಬಹುದು, ಶೋಷಕ ಶಕ್ತಿಗಳ ವಿರುದ್ಧ ಬಂಡೇಳುವ ಅಂಶ, ಸ್ಥಾಪಿತ ವ್ಯವಸ್ಥೆಯ ವಿರುದ್ಧ ಹೋರಾಟದ ಮನೋಭಾವ ಈ ಅಂಶಗಳಿಂದ ಬರಹಗಾರನ ಬರವಣೆಗೆಗೆ ಮೂಲ ಸೆಲೆಗಳೆಂದು ಪುರಾಣಿಕರು ವ್ಯಕ್ತಪಡಿಸುವುದನ್ನು ನೋಡಿದಾಗ ಎಲ್ಲೊ ಒಟ್ಟು ಬರಹಗಾರನ ಪ್ರೇರಣಾತ್ಮಕ ಅಂಶಗಳು ಕಂಡುಬರುತ್ತವೆ. ಅಂದರೆ ಈ ಸಮಾಜದಲ್ಲಿ ಹೊಸತನದ ಹಾಗೂ ನ್ಯಾಯದ, ಸತ್ಯದ ಅಂಶಗಳನ್ನು ಮೈಗೂಡಿಸಿಕೊಂಡು ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎನ್ನುವ ಸಿದ್ಧಾಂತದ ಪರಿಕಲ್ಪನೆ ಇಲ್ಲಿ ಕಾಣಬಹುದು.

ಆದರೆ ಸಿದ್ಧಯ್ಯ ಪುರಾಣಿಕರು ನಾನು ಬರೆಯಲು ಕಾರಣವಾದುದು ಕನ್ನಡದ ಕರೆ ಎನ್ನುತ್ತಾರೆ. ಯಾಕೆಂದರೆ ನವೋದಯ ಸಂದರ್ಭದ ಕವಿ ಆಗಿರುವುದರಿಂದ, ಆಗ ತಾನೇ ಕನ್ನಡ ಚಳುವಳಿಯ ಪ್ರಭಾವ, ಕನ್ನಡದ ಸಭೆಗಳು, ಕುಕ್ಕನೂರು ವಿದ್ಯಾನಂದ ಗುರುಕುಲದಲ್ಲಿಯ ತನು ಕನ್ನಡ, ಮನ ಕನ್ನಡ, ಜೀವನ ಕನ್ನಡ ವಾಣಿಗಳು ಇವರಿಗೆ

ಕನ್ನಡದ ಬರವಣಿಗೆಗೆ ಸಾಹಿತ್ಯ ರಚಿಸಲು ಸ್ಫೂರ್ತಿ ನೀಡಿತು. ಹಾಗೂ ಬಾಲ್ಯದಲ್ಲಿಯ ಕನ್ನಡದ ಅಭಿಮಾನ ಕನ್ನಡ ಕವನ ಸ್ಪರ್ಧೆ ಘಟನೆ ಅಲ್ಲಿ ಕವನ ಸ್ಪರ್ಧೆಗೆ ಒಂದೇ ಕವಿತೆ ಇದ್ದಿದ್ದರಿಂದ ತಾವು ಊರ ಹೊರಗೆ ದೂರದವರೆಗೆ ಸುತ್ತಾಡಿ "ಬೆಳಗು" ಕವಿತೆ ಬರೆದು ಸ್ಪರ್ಧೆಗೆ ಕೊಟ್ಟಾಗ ಇವರದೇ ಪ್ರಥಮ ಬಹುಮಾನ. ಅಂದಿನಿಂದ ಕನ್ನಡ ಪ್ರೇಮವನ್ನು ಕನ್ನಡಕ್ಕಾಗಿ ದುಡಿಯುವುದು, ಜೊತೆಗೆ ಕನ್ನಡದಲ್ಲಿ ಬರೆಯುವುದೂ ಅಗತ್ಯವಾದದೆಂಬ ಭಾವನೆಯಿಂದ ಬರೆಯತೊಡಗಿದರು.

ಈ ಹೊತ್ತಿಗಾಗಲೇ ಕುವೆಂಪು ಅವರ ಕನ್ನಡವೆನೆ ಕುಣಿದಾಡುವ ಪ್ರಭಾವಿಕ ಅಂಶಗಳಿಗೆ ಇವರು ಒಲಿದಿದ್ದರು ಆ ನಿಟ್ಟಿನಲ್ಲಿ ಇವರು ಹೆಚ್ಚಾಗಿ ಕನ್ನಡ ನಾಡು, ಕುಲ, ನೆಲ ಇವುಗಳನ್ನು ಕುರಿತು ಪದ್ಯಗಳು ಮನಮೋಹಕವಾಗಿವೆ.

ಉದಾ: ಹೊತ್ತಿತೋ ಹೊತ್ತಿತೋ ಕನ್ನಡದ ದೀಪ
ಮುಗಿಯಿತೋ ಮುಗಿಯಿತೋ ಶತಮಾನಗಳ ಶಾಪ
ಕನ್ನಡಕ್ಕೆ ಬಲವಕ್ಕೆ ಕನ್ನಡಕ್ಕೆ ಗೆಲವಕ್ಕೆ
ಕನ್ನಡದ ಕುಲ ನಿತ್ಯ ಸತ್ಯವಕ್ಕೆ
ಕನ್ನಡದ ಪ್ರೇಮವೇ ಕನ್ನಡಿಗನುಸಿರಕ್ಕೆ
ಬರದಿರಲಿ ಎಂದಿಗೂ ಕನ್ನಡಕ್ಕೆ ಧಕ್ಕೆ"

ಕಲಬುರ್ಗಿಯ ಕನ್ನಡ ಉತ್ಸವಗಳಿಗೆ ಆಗಮಿಸಿದ ರಂ.ಶ್ರೀ. ಮುಗಳಿ, ಪ್ರೊ. ವಿ.ಕೃ. ಗೋಕಾಕ, ದ.ರಾ. ಬೇಂದ್ರೆ, ಬಿ.ಎಂ.ಶ್ರೀ., ಮಾಸ್ತಿ, ತೀ.ನಂ.ಶ್ರೀ., ಡಿ.ಎಲ್.ಎನ್. ಇವರ ಒಂದು ಮಾರ್ಗದರ್ಶನದಿಂದ ಇವರಿಗೆ ಇನ್ನೂ ಕನ್ನಡದ ಮೇಲಿನ ಪ್ರೀತಿ ಹೆಚ್ಚಾಗಿ ಆರಂಭದಿಂದಲೂ ಕನ್ನಡದ ಪೋಷಣೆಗೆ ಸಾಹಿತ್ಯ ರಚನೆಗೆ ಎಲ್ಲೂ ಧಕ್ಕೆಯಾಗದೆ ಪೂರಕವಾಗಿ ಪೋಷಿಸಿರುವುದು ಕಂಡು ಬರುವ ಅಂಶ ಹೀಗಾಗಿ ಸಾಹಿತ್ಯವು 'ಬಿಟ್ಟೆನೆಂದರೂ ಬಿಡದ ಮಾಯೆಯಲ್ಲ' ಮೋಡಿಯಾಗಿ ಹುಚ್ಚು ಬೆಳೆಸಿಕೊಂಡವರು ಇವರು ಈ ಅಂಶ ಗೋಚರಿಸುತ್ತದೆ.

"ಸರ್ಕಾರದ ಸೇವೆ ಇವರಿಗೆ ದೊರೆತಿರುವುದರಿಂದ" ಬರೆಯಲು ಪ್ರೇರಣೆ. ಹೇಗೆಂದರೆ ವರ್ಗಾವಣೆಯ ನಿಮಿತ್ತ ಸಮಗ್ರ ಕರ್ನಾಟಕ ಸುತ್ತಿರುವುದರಿಂದ ಕರ್ನಾಟಕದ ಕಲೆಯ ನೆಲೆಗಳನ್ನು ಚೆಲುವಿನ ತಾಣಗಳನ್ನು ಸಾವಿರಾರು ಹಳ್ಳಿಗಳನ್ನು ಬೇರೆ ಬೇರೆ ಭಾಗಗಳ ಕನ್ನಡಿಗರ ಸೌಂದರ್ಯವನ್ನು ಕಣ್ಣಾರೆ ಕಂಡಿರುವುದರಿಂದ ಕನ್ನಡದ ಮೇಲಿನ ಮಮತೆ ಆಳ ಅಗಲಗಳನ್ನು ಅನುಭವದಿಂದ ಪ್ರಾಚೀನ ಸಾಹಿತ್ಯ ರಚಿಸಿದರು

ಉದಾ: ಭಾರತವು ಸಂಕ್ಷಿಪ್ತ ಬ್ರಹ್ಮಾಂಡವಾದರೆ, ಕರ್ನಾಟಕ
ಸಂಕ್ಷಿಪ್ತ ಭಾರತ ನೋಡಾ!
ಇಲ್ಲಿ ಇಲ್ಲದುದು ಇನ್ನೆಲ್ಲಿದೆ ತೋರಾ!
ಕನ್ನಡ ನಾಡಿನಲ್ಲಿ ಜನ್ಮವ ಬೇಡಿಕೊಂಡರೆ ಎಲ್ಲವನ್ನೂ

ಬೇಡಿಕೊಂಡಂತೆ!
ಕನ್ನಡ ಸಂಸ್ಕೃತಿ ಮೈಗೂಡಿಸಿಕೊಂಡರೆ ಎಲ್ಲವನ್ನೂ
ಪಡೆದುಕೊಂಡಂತೆ![08]

ಈ ರೀತಿಯಾಗಿ ಉದ್ಗರಿಸುವ ಮಟ್ಟಕ್ಕೆ ಬರವಣಿಗೆ ಹಂತ ತಲುಪಿರುವುದು ನೋಡುತ್ತೇವೆ. ಈ ಲೇಖನದಲ್ಲಿ ಇವರಿಗೆ ತಾವು ಬರೆಯಲು ಪ್ರಚೋದಿಸಿದ ಅಂಶಗಳನ್ನು ಸ್ಪಷ್ಟಪಡಿಸುತ್ತಾರೆ. ಏನೆಂದರೆ ಕನ್ನಡ ನಾಡು ನುಡಿಗಳ ಪ್ರೇಮವೇ, ಹಾಗಾಗಿ ಕನ್ನಡದ ಪದ್ಯಗಳು ಹೆಚ್ಚು ರಚಿಸಿದ್ದಾರೆ. ಸ್ವತಂತ್ರದ ಹೋರಾಟದ ಗಾಂಧಿ, ಅಂಬೇಡ್ಕರ್ ಮುಂತಾದ ಮಹಾನ್ ನಾಯಕರ ತತ್ವಗಳು ಹಾಗೂ ಕನ್ನಡನಾಡಿನ ಉಳಿವಿಗಾಗಿ ಹೋರಾಟದ ಅಂಶಗಳು ಇವರ ಬರವಣಿಗೆಗೆ ಸ್ಫೂರ್ತಿ ನೀಡದವು.

ಸರಕಾರಿ ಸೇವೆಗೆ ಸೇರಿದ ಇವರು ವಿರಾಮದ ವೇಳೆಯಲ್ಲಿ ಕ್ಲಬ್ಬು, ಕ್ರೀಡೆ, ಕುದುರೆ, ಜೂಜು ಎನ್ನದೆ ಓದುವುದು, ಬರೆಯುವುದು ಹವ್ಯಾಸವನ್ನಾಗಿ ಮಾಡಿಕೊಂಡು ಹಿರಿಯ ಸಾಹಿತಿಗಳೊಡನೆ ಕೃತಿಗಳೊಡನೆ ಸಂಪರ್ಕದಿಂದ ಬುದ್ಧಿ ಬೆಳೆಸಿಕೊಂಡು ಸಹೃದಯರ ಸಂಪತ್ತು ಬೆಳೆಸಿದರು.

- ಹೀಗೆ ಈ ಲೇಖನದಲ್ಲಿ ತಾವು ವಿದ್ಯಾರ್ಥಿ ದೆಸೆಯಿಂಲೇ ಕನ್ನಡದ ಕೆಲಸಗಳಲ್ಲಿ ಅತ್ಯಂತ ಕ್ರಿಯಾತ್ಮಕವಾಗಿ ಪಾಲ್ಗೊಂಡಿರುವುದು ಕಾಣುತ್ತೇವೆ.
- ಕಲಬುರ್ಗಿ ಕಾಲೇಜಿನ ಯುನಿಯನ್ ಕಾರ್ಯದರ್ಶಿ, ಕನ್ನಡ ಸಂಘದ ಕಾರ್ಯದರ್ಶಿ ವಿಶ್ವವಿದ್ಯಾಲಯದ ಕರ್ನಾಟಕ ಸಂಘದ ಉಪಾಧ್ಯಕ್ಷರರಾಗಿ ಕಾರ್ಯನಿರ್ವಹಿಸಿದರು. ಸಾಹಿತ್ಯ ಕೃಷಿ ಮಾಡಿರುವುದು ಅಭಿನಂದನೀಯ
- ವೃತ್ತಿ ಜೊತೆಗೆ ಪ್ರವೃತ್ತಿಯಾಗಿ ಸಾಹಿತ್ಯ ರಚಿಸಿದ ಇವರು ಶಿಸ್ತಿನಿಂದ ಕೂಡಿದ ಅಧ್ಯಾಯನ ಶೀಲ ಪ್ರವೃತ್ತಿ ಕಂಡುಬರುತ್ತದೆ. ಹಾಗಾಗಿ ಉನ್ನತ ಅಧಿಕಾರಿಯಾಗಿಯೂ ಕನ್ನಡದ ಕೆಲಸಕ್ಕೆ, ಬರವಣಿಗೆಗೆ ಕೈಹಾಕಿರುವುದು ಪ್ರಶಂಸಾರ್ಹದ ಕೆಲಸ ಎನ್ನಬಹುದು
- ಪ್ರಮುಖವಾಗಿ ಇವರು ಬರೆಯಲು ಕನ್ನಡದ ಅಭಿಮಾನ, ಕನ್ನಡದ ಕೆಲಸಕ್ಕಾಗಿ ಇವರ ಹೆಚ್ಚು ಪದ್ಯಗಳು ನಾಡು, ನುಡಿ, ನೆಲ ಕುರಿತಾದುದಾಗಿವೆ.

**ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಲೋಕದಲ್ಲಿ ಕಾಣುವ ವಿಚಾರಗಳು, ಆಚಾರಗಳು, ರೂಢಿ ಸಂಪ್ರದಾಯಗಳು
* ತನ್ನ ದೇಶದ ಗತವೈಭವವನ್ನು ವರ್ಣಿಸುವ ದೇಶಾಭಿಮಾನ
* ಶೋಷಕ ಶಕ್ತಿಗಳ ವಿರುದ್ಧ ಬಂಡೇಳುವ ಅಂಶ
* ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು
* ಕನ್ನಡದ ಕರೆ, ಕನ್ನಡದ ಚಳುವಳಿಯ ಪ್ರಭಾವ
* ವಿದ್ಯಾನಂದ ಗುರುಕುಲದಲ್ಲಿಯ ತನು ಕನ್ನಡ, ಮನು ಕನ್ನಡ ಜೀವನ ಕನ್ನಡ

ವಾಣಿಗಳು

* ಕನ್ನಡ ಕವನ ಸ್ಪರ್ಧೆಯ ಘಟನೆ (ಬೆಳಗು)
* ಸರ್ಕಾರದ ಸೇವೆ ದೊರೆತಿರುವುದರಿಂದ ಗಾಂಧಿ, ಅಂಬೇಡ್ಕರ್ ತತ್ವಗಳು

**ಅಡಿ ಟಿಪ್ಪಣಿ**

೧. ಅಮರೇಶ ನುಗಡೋಣಿ (ಸಂ) ನಾನೇಕೆ ಬರೆಯುತ್ತೇನೆ, ಪುಟ–೧
೨. ಅದೇ ಪು–೨
೩. ಅದೇ ಪು–೩
೪. ಅದೇ ಪು–೫
೫. ಅದೇ ಪು–೫
೬. ಅದೇ ಪು–೧೯
೭. ಅದೇ ಪು–೨೧
೮. ಅದೇ ಪು–೩೧
೯. ಅದೇ ಪು–೩೩
೧೦. ಅದೇ ಪು–೩೫
೧೧. ಅದೇ ಪು–೩೯
೧೨. ಅದೇ ಪು–೪೫
೧೩. ಅದೇ ಪು–೫೫
೧೪ ಅದೇ ಪು–೬೦
೧೫ ಅದೇ ಪು–೬೧
೧೬. ಜಿ.ಎಸ್. ಸಿದ್ಧಲಿಂಗಯ್ಯ ಮತ್ತು ಎಂ.ಎಚ್. ಕೃಷ್ಣಯ್ಯ (ಸಂ) ಸಾಲುದೀಪಗಳು ಪು–೧೯

೨

೧. ವ್ಯಾಸರಾಯ ಬಲ್ಲಾಳ
೨. ಬಿ.ಸಿ. ರಾಮಚಂದ್ರ ಶರ್ಮ
೩. ಜಿ.ಎಸ್. ಶಿವರುದ್ರಪ್ಪ
೪. ಯಶವಂತ ಚಿತ್ತಾಲ
೫. ಯು.ಆರ್. ಅನಂತಮೂರ್ತಿ
೬. ಪಿ. ಲಂಕೇಶ್
೭. ಕೆ.ಎಸ್. ನಿಸಾರ್‌ಅಹಮದ್
೮. ಚಂದ್ರಶೇಖರ ಕಂಬಾರ

ಈ ಅಧ್ಯಾಯದಲ್ಲಿ ಇವರ ಬರಹಗಳನ್ನಷ್ಟೇ ವಿಭಾಗಿಸಿ ಅಧ್ಯಯನ ಮಾಡಲು ಕಾರಣವೇನೆಂದರೆ, ಇವರು ಆಧುನಿಕ ಸಾಹಿತ್ಯವನ್ನು ಬಲಪಡಿಸಿದವರು. ಎರಡನೇ ತಲೆಮಾರಿನವರಾಗಿ ಕಾಣಿಸಿಕೊಂಡ ಇವರು ಸಾಹಿತ್ಯದ ಮೂಲಕ ಹೊಸ ತಾತ್ವಿಕತೆಯನ್ನು ರೂಪಿಸಿದವರು. ಮೊದಲ ತಲೆಮಾರಿನವರು ಸಮಾಜ, ಆದರ್ಶ, ಕನಸು, ಆಧ್ಯಾತ್ಮ ಮುಂತಾದ ಪರಿಕಲ್ಪನೆಗಳನ್ನು ಸಾಹಿತ್ಯದ ಮೂಲಕ ವಿಸ್ತರಿಸಿದವರು. ಇವರ ನಂತರ ಬಂದ ಪ್ರಗತಿಶೀಲ ಮತ್ತು ನವ್ಯ ಎಂದು ಕರೆಯುವ ಸಾಹಿತ್ಯ ಪಂಥಕ್ಕೆ ಸೇರಿ ವ್ಯಕ್ತಿ ಕೇಂದ್ರೀತ, ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಮತ್ತು ಸಾಂಸ್ಥಿಕವಾದ ಧರ್ಮ, ಶಿಕ್ಷಣ, ದಾಂಪತ್ಯ ಮುಂತಾದವುಗಳನ್ನು ಪ್ರಶ್ನಿಸಿ ಹೊಸ ವ್ಯಾಖ್ಯಾನವನ್ನು ಬರೆದರು. ಕವಿಗಳಾಗಿ, ಕಥನಕಾರರಾಗಿ, ನಾಟಕಕಾರರಾಗಿ, ಚಿಂತಕರಾಗಿ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ವ್ಯಕ್ತಿ ವಿಶಿಷ್ಠತೆಯನ್ನು ಆಲೋಚಿಸಿದವರು. ಇವರ ಸಾಹಿತ್ಯ ಚಿಂತನೆ ವಿಶಿಷ್ಟವಾದುದು. ಸಿದ್ಧವಾದ ನೈತಿಕತೆಯನ್ನು ನಿರಾಕರಿಸಿ ವ್ಯಕ್ತಿ ಸ್ವಾತಂತ್ರ್ಯವನ್ನು ಅದರ ಜವಾಬ್ದಾರಿಯನ್ನು ಎತ್ತಿ ಹಿಡಿದವರು. ತಮ್ಮ ಬರಹದ ಉದ್ದೇಶವನ್ನು ತಮ್ಮ ಲೇಖಗಳಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಈ ದೃಷ್ಟಿಯಿಂದ ಇವರೆಲ್ಲರನ್ನು ಇಲ್ಲಿ ಅಧ್ಯಯನಕ್ಕೆ ಅಳವಡಿಸಲಾಗಿದೆ.

# ಬದುಕಿನ ಅರ್ಥ ತಿಳಿಸಿದ ಮುಂಬಯಿ

ಶ್ರೀವಾಸರಾಯ ಬಲ್ಲಾಳರು

ಬಲ್ಲಾಳರು ಉತ್ತಮ ವಕ್ತಾರರು ತಮ್ಮ ಮಾಗಿದ ವಿಚಾರ ಸರಣಿಯಿಂದಾಗಿ ತಿಳಿ ಹೇಳುವ ರೀತಿಯ ಆತ್ಮೀಯವೆನಿಸುವ ಶೈಲಿಯಿಂದಾಗಿ ಅವರು ಮುಂಬಯಿಯ ಕನ್ನಡ ವಾಗ್ಮಿಗಳಲ್ಲಿಯೇ ಅತೀ ಹಿರಿಯರೆನಿಸಿದ್ದಾರೆ ಬಲ್ಲಾಳರ ಮುಖ್ಯ ಕರ್ತವ್ಯವಾದ ಬರವಣಿಗೆಗೆ ಬಂದಾಗ ಅವರು ಕಾದಂಬರಿಕಾರರು ಕಥೆಗಾರರು ಮಾತ್ರವೇ ಅಲ್ಲ. ರಾಜಕೀಯ ವಿಡಂಬನೆ ಮುಂಬಯಿ ಕನ್ನಡಿಗರ ಸಮಸ್ಯೆಗಳ ವಿಮೋಚನೆ, ತಾತ್ವಿಕಚಿಂತನೆ, ಗ್ರಂಥವಿಮರ್ಶೆ, ರೇಡಿಯೋಭಾಷಣ, ನಾಟಕ, ಪ್ರವಾಸಕಥನ ಮುಂತಾದ ವಿವಿಧ ಬಗೆಯ ಬರಹಗಳು ಅವರ ಲೇಖನಿಯಿಂದ ಮೂಡಿಬಂದಿವೆ.

ನವೋದಯ ಪ್ರಗತಿಶೀಲ ನವ್ಯ ಚಳುವಳಿಗಳಲ್ಲಿರುವ ಸತ್ವವನ್ನು ಹೀರಿ ಮಹಾನಗರ ಮಧ್ಯಮವರ್ಗದ ಬದುಕು, ಕುಟುಂಬ, ವ್ಯವಸ್ಥೆ, ಆರ್ಥಿಕ ವ್ಯವಹಾರ, ಸಾಮಾಜಿಕ ರೀತಿ ನೀತಿಗಳನ್ನು ತಮ್ಮ ಸಾಹಿತ್ಯದ ಹಂದರದಲ್ಲಿ ಹೆಣೆದು ವಾಚಕರಿಗೆ ವಿಶಿಷ್ಟ ಅನುಭವ ನೀಡಿದವರು ವ್ಯಾಸರಾಯ ಬಲ್ಲಾಳರು. ಇವರು ತಾವು ಬರವಣಿಗೆಗೆ ಬರಲು ಪ್ರಮುಖವಾಗಿ ಬಾಲ್ಯದಲ್ಲಿ ತಾವು ನೋಡುತ್ತಿದ್ದ ಅಂಶಗಳು ಸುತ್ತಮುತ್ತಲು ನಡೆಯುತ್ತಿರುವ ವಾಸ್ತವ ಕುತೂಹಲಗಳು ಹಾಗೂ ಕೆಳವರ್ಗದ ಪರಿಸ್ಥಿತಿಗಳು ಹಾಗೂ ವೈದಿಕರಾಗಿದ್ದ ಇವರು ಮಡಿವಂತಿಕೆ ಇವುಗಳಿಂದ ಪಾರಾಗುವುದು ಸ್ತ್ರೀ ಶೋಷಣೆಯ ಹಲವು ಮುಖಗಳು ಬರೆವಣಿಗೆಯಲ್ಲಿ ಸೃಜನಶೀಲತೆಗೆ ಎಡಮಾಡಿಕೊಟ್ಟವು ಹಾಗಾಗಿ ಈ ಅಂಶದಿಂದ ವೈದಿಕರಾಗಿದ್ದ ಇವರು ಮನೆಯ ವಾತಾವರಣ ಆಚಾರ ವಿಚಾರಗಳು ಮೈಗೂಡಿಸಿಕೊಂಡಿದ್ದರು. ಈ ತನ್ಮೂಲಕ ಅವರು ಒಂದು ಹೊಸಬೆಳಕನ್ನು ಕಂಡುಕೊಂಡರು ಅವು ಬರೆಯಲು ಆಸರೆಯಾದವು ಹಾಗು ಈ ತಮ್ಮ ಮಡಿವಂತಿಕೆ ಎಂಬ ಕತ್ತಲಿಂದ ಪಾರಾಗಲು ಹಾಗೂ ಈ ಕಳವಳಗಳನ್ನೆಲ್ಲಾ ಎಲ್ಲಾ ತೂಡಿಕೊಳ್ಳಲು ಅಭಿವ್ಯಕ್ತಿ ಮಾಧ್ಯಮ ಬೆಳೆಸಿಕೊಳ್ಳಲು ಕಾರಣ ಎಂದಾಗ ಆ ವ್ಯವಸ್ಥೆ ಸರಿ ಹೋಗದ ಇಂತಹ ಒಂದು ಕ್ರೂರ ವ್ಯವಸ್ಥೆಗೆ ತಿಲಾಂಜಲಿ ಹಾಡಬೇಕು ಎಂಬ ಉದ್ದೇಶದಿಂದ ಬರವಣಿಗೆ ಮೃಗೂಡಿಸಿಕೊಂಡಿರಬೇಕು ಎಂಬ ಅಂಶ ಮನದಟಾಗುತ್ತದೆ.

ಸೋದರಮಾವನು ತಂದಿದಡುತ್ತಿದ್ದ ಬುಟ್ಟಿ ಗ್ರಂಥಗಳನ್ನು ಓದುತ್ತಿದ್ದರು.[7] ಈ ಓದಿನ ಅಪಾರ ಸಂಗ್ರಹದಿಂದ ಜೊತೆಗೆ ಉಡುಪಿಯ ಮ್ಯುನಿಸಿಪಲ್ ಗ್ರಂಥಾಲಯದಲ್ಲಿ ಆಂಗ್ಲ ಸಾಹಿತ್ಯದ ಮಹಾನ್ ಲೇಖಕರ ಮಹತ್ವದ ಗ್ರಂಥಗಳು ಇವರ ಮೇಲೆ ಪ್ರಭಾವ ಬೀರಿದೆ ಹೀಗೆ ತಾವು ಬಾಲ್ಯದಲ್ಲಿ ಮೈಗೂಡಿಸಿಕೊಂಡಿದ್ದ ಓದು ಹಾಗೂ 'ಪ್ರಜಾಮತ' ಪತ್ರಕೆಯಲ್ಲಿ

'ವಿಕಟ ವಿನೋದ' ಪತ್ರಿಕೆಯಲ್ಲಿ ಸಣಕತೆಗಳು ಪ್ರಕಟವಾದವು ಎನ್ನುತ್ತಾರೆ ಈ ಅಂಶಗಳೇ ಅವರಿಗೆ ಮುಂದಿನ ಬರವಣಿಗೆಗೆ ಹಾಗೂ ವ್ಯಾಸಂಗಕ್ಕೆ ಅನುವುಮಾಡಿಕೊಟ್ಟಿರಬೇಕು ಹಾಗೂ ೧೯೪೪ರಲ್ಲಿ ಮುಂಬಯಿಗೆ ಉನ್ನತ ವ್ಯಾಸಂಗಕ್ಕೆ ಬಂದರು ಅಲ್ಲಿ ಆರ್ಥಿಕ ಕಾರಣಗಳಿಂದಾಗಿ ಕಂಪನಿಯ ಶೀಘ್ರಲಿಪಿಕಾರನಾಗಿ ಸಣ್ಣ ಉದ್ಯೋಗವನ್ನು ಆಯ್ದುಕೊಂಡೆ ಎನ್ನುತ್ತಾರೆ ಅಂದರೆ ಅದು ಅನಿವಾರ್ಯವಾಗಿತ್ತು ಎಂಬ ಅಂಶ ಮನಗಾಣಬಹುದು.

ಹಾಗೂ ತಾವು ದಿನಚರಿ ಎಂದೆ ಬರೆದಿಟ್ಟ ದಿನದ ಚಟುವಟಿಕೆಗಳ ವರದಿಗಳು ಒಬ್ಬ ಆತ್ಮೀಯ ಸಂಗಾತಿಯೊಡನೆ ಸಂಭಾಷಣಾ ರೂಪದ ಚರ್ಚೆ ಹಾಗೂ ಸತ್ಯ ಸೌಂದರ್ಯಗಳು ಕುರಿತ ಪರಿಕಲ್ಪನೆಗಳು ವಿಚಾರಗಳು ಆದರ್ಶದ ಪರಿಕಲ್ಪನೆಗಳು ಸಣ್ಣ ಕಥಗಳಾಗಿ ಮಾರ್ಪಟ್ಟಿದೆ ಎನ್ನುತ್ತಾರೆ. ಅಂದರೆ ಮುಂಬಯಿಗೆ ಬಂದ ಹೊಸದರಲ್ಲಿ ತಾವು ಏಕಾಂತದ ವ್ಯಕ್ತಿಯಾಗಿದ್ದರಿಂದ ಅವರು ಬರೆದಿಟ್ಟ ದಿನಚರಿಯನ್ನು ಸಣ್ಣ ಕಥಗಳಾಗಿ ಮಾರ್ಪಡಿಸಿದ್ದಾರೆ ಇವು ಮುಂದೆ ಕಥೆಗಳನ್ನು ಬರೆಯಲು ಸ್ಫೂರ್ತಿದಾಯಕವಾದವೂ.

ಮುಂಬಯಿ ಪರಿಸರದಲ್ಲಿನ ಪತ್ರಿಕೋದ್ಯಮದ ಕನಸನ್ನು ನನಸಾಗಿಸುವ ಕನ್ನಡ ಪತ್ರಿಕೋದ್ಯಮದ ಸನ್ನಿವೇಶ ಇಲ್ಲಿ ೧೯೪೭ ರಲ್ಲಿ ಸ್ವಾತಂತ್ರ್ಯ ಹೋರಾಟದ ಸಂದರ್ಭದ ಕಾಲ ಮುಂಬಯಿಂದ "ನುಡಿ" ಎಂಬ ಕನ್ನಡ ರಾಜಕೀಯ ಸಾಪ್ತಾಹಿಕ ಪ್ರಕಟ ಅಲ್ಲಿ ರಾಜಕೀಯ ಲೇಖನಗಳನ್ನು ಬರೆಯುವುದರ ಮುಖಾಂತರ ಸರ್ಕಾರಕ್ಕೆ ಎಚ್ಚರ ಕೊಟ್ಟು ಇವರ ಬರವಣಿಗೆಯನ್ನು ವೃಧಿಸಿಕೊಂಡಿರುವುದು ಕಾಣುತ್ತೇವೆ.

ಪತ್ರಿಕೆಯ ಸಂಪಾದಕನ ವೃತ್ತಿ ಇವರ ಬರವಣಿಗೆಗೆ ಇನ್ನೂ ಶಕ್ತಿ ನೀಡಿ ಉತ್ತಮವಾದಂತಹ ಸೃಜನಶೀಲ ಬರವಣಿಗೆಗೆ ಪೂರಕವಾಗಿರಬೇಕು ಮುಂದುವರೆದು ಇವರು ಮುಂಬಯಿಯ ಅನುಭವ ಪ್ರಪಂಚ ಬರೆಯಲು ಸ್ಫೂರ್ತಿ[೨] ಎಂದು ಲೇಖಕರೇ ಈ ಲೇಖನದಲ್ಲಿ ಹೇಳುತ್ತಾರೆ ಅಂದರೆ ಯಾವುದೇ ಒಬ್ಬ ಸೃಜನಶೀಲ ಲೇಖಕನಾಗಲಿ ಕಲಾವಿದನಾಗಲಿ ಅವನಿಗೆ ಬಾಲ್ಯದ ಪರಿಸರದ ಜೊತೆಗೆ ತಾವು ಕಾರ್ಯ ನಿರ್ವಹಿಸಿದ ಸ್ಥಳ ಪ್ರಮುಖ ಪಾತ್ರ ವಹಿಸುವಂತೆ ಇಲ್ಲಿ ವ್ಯಾಸರಾಯ ಬಲ್ಲಾಳ ಅವರಿಗೆ ಮುಂಬಯ ಜೀವನ ಅವರ ಲೇಖನಿಗೆ ಜೀವಂತಿಕೆಯನ್ನು ತಂದುಕೊಡುತ್ತದೆ. ಮುಂಬಯಿ ಜೀವನ ಎಂದರೆ ಅಲ್ಲಿಯೇ ಯಾಂತ್ರಿಕ ರೂಢಿಗಳು ಹಾಗೂ ಗ್ರಾಮೀಣ ಬದುಕಿನ ಸಂಸ್ಕಾರಗಳ ವಿರುದ್ಧದ ಬದುಕು ವೈದಿಕರಾದ ಇವರು ಸಂಸ್ಕಾರದಲ್ಲೇ ಬೀಳದ ಇದು ಇವರಿಗೆ ಹೊಸತನದ ಪಾಠವನ್ನು ಕಲಿಸುತ್ತಿತ್ತು ಆ ಮೂಲಕ ಅಲ್ಲಿಯ ಅಂಶಗಳು ಇವರ ಕಥೆ ಕಾದಂಬರಿಗೆ ಸ್ಫೂರ್ತಿದಾಯಕವಾದವು.

ನುಡಿಪತ್ರಿಕೆಗಾಗಿ ಬರೆದ ಲೇಖನಗಳು ಅಲ್ಲಿಯ ಸಂಪಾದನ ವೃತ್ತಿ ಅದರಿಂದ ದೊರಕಿದ ಅನುಭವಗಳು ಇವುಗಳನ್ನು ಒಟ್ಟುಗೂಡಿಸಿ ಹೇಮಂತಗಾನ ಎಂಬ ಕಾದಂಬರಿ ಬರೆದೆ ಎನ್ನುತ್ತಾರೆ. ಅಂದರೆ ಬರೆದ ಲೇಖನಗಳಿಂದ ಬರವಣಿಗೆಯಲ್ಲಿ ಒಂದು ಶೈಲಿ ರೂಢಿಸಿ ಕರಗತ ಮಾಡಿಕೊಂಡು ಒಂದು ಕಾದಂಬರಿ ಬರೆದರು. ಹೀಗೆ ಸಣ್ಣ ಸಣ್ಣ ಅಂಶಗಳು ಸಹ ಇವರ ಬರಹಕ್ಕೆ ದಾರಿಮಾಡಿಕೊಟ್ಟವು 'ಬದುಕಿನ ಅರ್ಥತಿಳಿಸಿದ ಮುಂಬಯಿ' ಈ

ಲೇಖನದಲ್ಲಿ ತಾವು ಯಾವ ರೀತಿ ಬರವಣಿಗೆಗೆ ಬಂದರು ಎಂಬ ಅಂಶವು ಕಂಡುಬರುತ್ತವೆ. ಮುಂಬಯಿನ ಪ್ರತಿಯೊಂದು ಘಟನೆಗಳು, ಅಲ್ಲಿನ ಪರಿಸರ, ಹಾಗೂ ತಾವು ಹೊಸದರಲ್ಲಿ ಸೇರಿದ ಒಂದು ರೀತಿಯ ಬಿಡುಗಡೆಯಸುಖ ಸಮ್ಮಿಶ್ರ ಜನಜೀವನದ ಸಂಸ್ಕಾರಗಳ ಹೊಸತನವನ್ನು ಗುರುತಿಸುತ್ತಾ ವಿಸ್ತರಿಸಿಕೊಂಡ ಅನುಭವ ಪ್ರಪಂಚ ಬದುಕಿನ ಹಲವು ಮಗ್ಗಲುಗಳು, ಜಾತಿಯತೆಯ ನಿರ್ಬಂಧಗಳು, ಸಡಿಲವಾಗುವ ರೀತಿ ಹಾಗೂ ಮುಂಬೈ ಬದುಕಿನ ಸಮಗ್ರ ಜೀವನ ವಿಧಾನಗಳು ಇವರಿಗೆ ತಕ್ಕ ಪಾಠವನ್ನು ಕಲಿಸಿ ಅದರ ಅರ್ಥವನ್ನು ತಿಳಿಸಿದ ಈ ನಗರವೇ ಇವರಿಗೆ ಜೀವನಾಡಿ ಆ ಮೂಲಕ ಇವರೊಬ್ಬರು ಕಥೆಗಾರರಾಗಿ ಕಾದಂಬರಿಕಾರರಾಗಿ ಹೊರಹೊಮ್ಮಿದ್ದಾರೆ.

ಹಾಗೂ ಕಾರ್ಮಿಕವರ್ಗ, ಮುಂಬಯಿಯಲ್ಲಿನ ಪಾರ್ಕುಗಳು, ಪ್ರಣಯಗಳು, ಜೀವನದ ಅರ್ಥ ಹುಡುಕುತ್ತಿರುವ ವೃದ್ದರು ಅವರ ಒಟ್ಟುಬದುಕು ಇವರ ಕಥೆ, ಕಾದಂಬರಿ, ಲೇಖನ ಬರೆಯಲು ಕಾರಣವಾದ ಸನ್ನಿವೇಶಗಳು ಎಂದು ಹೇಳುವಾಗ ಬರೆಯುವವನಿಗೆ ಇವು ಗಾಢವಾದ ಅಂಶಗಳನ್ನು ಹುಡುಕಲು ಇತರರಿಗೆ ಸಂದೇಶ ತಿಳಿಸಲು ಇವುಗಳನ್ನು ಸೆರೆ ಹಿಡಿದಿಡಲು ಬರಹಗಾರ ಬರೆಯತ್ತಾನೆ.

ಅದೇರೀತಿ ಒಟ್ಟು ಈ ಲೇಖನ ಗಮನಿಸಿದಾಗ ಇವರ ಸಂಪೂರ್ಣ ಬರವಣಿಗೆ ಬದುಕನ್ನು ಕಳೆದ ಮುಂಬಯಿ ಹಾಗೂ ಅವರಿಗೂ ಬದುಕಿನ ಅರ್ಥ ತಿಳಿಸಿದ ಮುಂಬಯಿಯ ಜೀವನ ತಮ್ಮ ಬರವಣಿಗೆಗೆ ಪ್ರೇರಣೆ ಪ್ರಭಾವವಾಗಿದೆ. ಹೇಗೆಂದರೆ ಅಲ್ಲಿಯೇ ಜನ ಜೀವನದ ಜೊತೆಗೆ ಗಾಂಧೀಯುಗದ ಇತಿಹಾಸದ ಮರುಸೃಷ್ಟಿಯ ಉದೇಶಕ್ಕಾಗಿ ಹಾಗು ಬಾಲ್ಯದ ಸ್ತ್ರೀ ಶೋಷಣೆಯ ಸ್ತ್ರೀಯರಿಗೆ ಯಾವುದೇ ಅವಕಾಶವನ್ನು ನೀಡಿದೆ ಶೋಷಿಸುವುದು ಸೌಂದರ್ಯ ಪ್ರಜ್ಞೆಯೂ ಸಹ ಇವರ ಒಂದು ಬರವಣಿಗೆ ಪೂರಕವಾದ ಅಂಶವನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

**ಈ ಲೇಖನದಲ್ಲಿಯ ಪ್ರಮುಖ ಅಂಶಗಳು**

* ರೂಢಿಗತ ಸಂಪ್ರದಾಯ
* ಮನೆಯಲ್ಲಿನ ಮಡಿವಂತಿಕೆಗಳಿಂದ ಪಾರಾಗಲು
* ಮುಂಬಯಿಯ ನಗರ ಜೀವನ ಹಾಗೂ ಯಾಂತ್ರಿಕ ಬದುಕು
* ನುಡಿ ಪತ್ರಿಕೆಗಾಗಿ ಬರೆದ ಲೇಖನಗಳು
* ಸಂಪಾದನ ವೃತ್ತಿಯಿಂದ ದೊರೆತ ಅನುಭವ
* ಸೋದರ ಮಾವ ತಂದಿಡುತ್ತಿದ್ದ ಬುಟ್ಟಿ ಗ್ರಂಥಗಳು
* ಗಾಂಧಿ ಹಾಗೂ ನೆಹರು ಅವರ ಆತ್ಮಕಥೆಗಳು
* ತಾವು ಬರೆದಿಟ್ಟ ದಿನಚರಿಯ ವರದಿಗಳು
* ಮುಂಬಯಿಯ ಅನುಭವ ಪ್ರಪಂಚ
* ಸ್ತ್ರೀಯರನ್ನು ಶೋಷಿಸುತ್ತಿರುವ ಘಟನೆ
* ಗಾಂಧಿಯುಗದ ಇತಿಹಾಸದ ಮರುಸೃಷ್ಟಿ

# ನಾನೇಕೆ ಬರೆಯುತ್ತೇನೆ.

ಡಾ. ಬಿ.ಸಿ. ರಾಮಚಂದ್ರಶರ್ಮ

ಆಧುನಿಕ ಕನ್ನಡದ ಮುಖ್ಯ ಕವಿಗಳಲೊಬ್ಬರೆಂದು ನವ್ಯ ಕಥಾ ಸಂಪ್ರದಾಯದ ಮೊದಲಿಗರೆಂದು ಹೆಸರಾದ ಬಿ.ಸಿ ರಾಮಚಂದ್ರಶರ್ಮ ಗೋಪಾಲಕೃಷ್ಣ ಅಡಿಗರಿಗಿಂತ ಭಿನ್ನ ಕಾವ್ಯ ಮಾರ್ಗವನ್ನು ರೂಪಿಸಲು ಪ್ರಯತ್ನಿಸಿದ ಪ್ರಮುಖಕವಿ ಸುಮಾರು ಐದು ದಶಕಗಳಿಂದ ಕಾವ್ಯ ರಚನೆಯಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡಿರುವ ಶರ್ಮರದು ಕಾವ್ಯದ ಬಗೆಗೆ ಶಬರಿ ಶ್ರದ್ಧೆಯ ಅತೀವ ನಿಷ್ಠೆ, ಅನೇಕ ಆಕರ್ಷಣೆ, ಅಮಿಷಗಳ ನಡುವೆಯೂ ಅವರು ಕಾವ್ಯದ ಶುದ್ಧರೂಪಕ್ಕೆ ಒಲಿದಂಥವರು ಪ್ರಗತಿಶೀಲ ಚಳುವಳಿ ಪ್ರಬಲವಾಗಿದ್ದ ಕಾಲದಲ್ಲಿ ನವ್ಯ ಸಂವೇದನೆ ಕನ್ನಡ ಸಾಹಿತ್ಯವನ್ನು ಪ್ರವೇಶಿಸುತ್ತಿದ್ದ ಸಂದರ್ಭದಲ್ಲಿ ಇವರು ಬರವಣಿಗೆಗೆ ಧೂಮಿಕಿದರು.

ನಾನೇಕೆ ಬರೆಯುತ್ತೇನೆ? ಸದರಿ ಈ ಲೇಖಕನವು ಲೇಖಕನಿಗೆ ಪ್ರಶ್ನೆಯೊಂದನ್ನು ತಂದೊಡ್ಡುತ್ತವೆ. ತಾವು ಯಾವ ದೃಷ್ಠಿಕೋನದಿಂದ, ಆಶಯದಿಂದ ಹಾಗೂ ತಾವು ಸಾಹಿತ್ಯ ರಚಿಸುವಾಗಿನ ಕೆಲವೊಂದು ಸಂದರ್ಭಗಳು ಘಟನೆಗಳು ಅವರಿಗೆ ಬರೆಯಲು ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ಹಾಗಾಗಿ ತಾವು ಒಂದು ಆಶಯದಿಂದ ಮತ್ತು ತಮಗೆ ಒದಗಿದ ಸಂದರ್ಭದಿಂದ ತಾವು ಬರೆಯುತ್ತೇನೆ. ಎಂದು ಈ ಲೇಖನದಲ್ಲಿ ಹೇಳಿದ್ದಾರೆ. ಯಾವುದೆಂದರೆ ಸುತ್ತಣ ಜಗತ್ತಿಲ್ಲದೆ ನಾನಿಲ್ಲ, ಅನ್ನುವುದು ದಿಟವಾದರೂ ನನ್ನಳೊಗಿನ ನನ್ನನ್ನು ರೂಢಿಸಿರುವುದೇ ನನ್ನ ಸುತ್ತಣ ಲೋಕವಾದರೂ ನನ್ನ ಕಾವ್ಯದ ವಸ್ತು ನಾನು, ನನ್ನೊಳಗಿನ ಜಗತ್ತು. ಅಲ್ಲಿಯ ನೋವು, ನಲಿವು, ಗೊಂದಲ, ನೆನಪು ಹಾಗೂ ಕನಸು ಮತ್ತು ಇಂಗ್ಲೀಷ್ ಕವಿ ಡಿಲನ್‌ಥಾಮಸ್, ಈ ಅಂಶಗಳು ವ್ಯಕ್ತಪಡಿಸಿದ್ದಾರೆ. ಈ ಅಂಶವನ್ನು ಚಿಂತನೆಗೆ ಒಳಪಡಿಸಿದಾಗ ಲೋಕದಲ್ಲಿಯ ನೋವುಗಳು ಕಷ್ಟಗಳು ಬಡತನ ಹಸಿವು ಕಾಮ, ಪ್ರೀತಿ, ಕರುಣೆ ಸುಖ ದುಖ:ಗಳ ಕುರಿತ ಚಿಂತನೆಯಿಂದ ಕಾವ್ಯ, ಕಥೆ, ಕಾದಂಬರಿ ತನ್ನಳೊಗಿನ ಜಗತ್ತಿನೊಂದಿಗೆ ರಚಿಸಿರುವುದು ಕಾಣಬವುದು.

ಕವಿಯು ಪ್ರಮುಖವಾದ ಕೆಲಸವೆಂದರೆ ಹುಟ್ಟಿನಿಂದ ಸಾಯುವವರೆಗೂ ಕಂಡದ್ದನ್ನು ಬರೆಯುವುದು ಎಂದು ಥಾಮಸ್ ಹೇಳಿದ್ದಾರೆ.[೪] ಅದನ್ನೇ ಶರ್ಮ ಅವರು ಈ ಜಗತ್ತಿನಲ್ಲಿ ಕಂಡದ್ದನ್ನು ಒಳಿತು ಕೆಡಕನ್ನು ತಮ್ಮ ಕಾವ್ಯದಲ್ಲಿ ಮೂಡಿಸಿದ್ದಾರೆ. ಸಾಮಾಜಿಕ ಕಾಳಜಿ ದೌರ್ಜನ್ಯಕ್ಕೆ ಒಳಗಾದವರ ಬಗ್ಗೆ ಸಹಾನುಭೂತಿಯಿಂದ. ಆ ಬಗ್ಗೆ ಅರಿವು ಮೂಡಿಸಲು ಈ ಸಾಮಾಜಿಕ ಕಳಕಳಿ ದೌರ್ಜನ್ಯಕ್ಕೆ ಎನ್ನುವ ಅಂಶವನ್ನು ಪರಿಗಣಿಸಿದಾಗ ಅನ್ಯಾಯದ

ವಿರುದ್ಧ, ನ್ಯಾಯದ ಪರ ಅಂಶಗಳು, ಅವು ಕಾವ್ಯದ ವಸ್ತುಗಳನ್ನಾಗಿ ಬರೆದರು. ವಿದೇಶದಲ್ಲಿ ೨೪ ವರ್ಷಗಳು ಇದ್ದುದರಿಂದ ಯೂರೋಪಿನ ಆಫ್ರಿಕಾದ, ಅನುಭವಗಳು ಚಿತ್ರಗಳನ್ನು ಬರೆಯಲು ಸ್ಫೂರ್ತಿ ನೀಡಿದವು. ಅಲ್ಲಿನ ವಿಶೇಷ ಅನುಭವಗಳು ಇರಬಹುದು ಹಾಗೂ ವಿಭಿನ್ನ ಪರಿಕಲ್ಪನೆಯು ಅಲ್ಲಿನ ಸಂದರ್ಭಗಳು, ಸನ್ನಿವೇಶಗಳು ತಮ್ಮ ಕಾವ್ಯದಲ್ಲಿ ಅಳವಡಿಸಿಕೊಂಡಿರವುದು ನೋಡಬಹುದು.

Poetry makes nothing happen" (ಪದ್ಯ ಏನನ್ನು ಸೃಷ್ಟಿ ಮಾಡದೆ ಇರುವಂತಹದ್ದು)ಅನ್ನುವ ಆಡೆನ್ನಿನ ಮಾತು ಮನವರಿಕೆಯಾದ ಮೇಲೆ ಇವರ ಮನೋಧರ್ಮ ಇವರನ್ನು ಎಂದೆಂದಿಗೂ ಕನ್ನಡದ ಸಂಪ್ರದಾಯದಿಂದ ಹೊರಗಿಡುವಂತೆ ಮಾಡಿತು. ಇವರು ಅದೇ ದಾರಿಯಲ್ಲಿ ಬರೆದರು. ಇವರ ಬರೆವಣಿಗೆ ಅನುಭವಗಳು ಮಾತ್ರ ಪರಕೀಯವೆನ್ನಿಸಿದವು ಏಕೆಂದರೆ ಅವು ಯೂರೋಪಿನ ಅನುಭವಗಳು ಇವರ ಪ್ರಕಾರಕ್ಕೆ ಕವನ ಸಾಮಾನ್ಯವಾಗಿ ಹುಟ್ಟುವುದಿಲ್ಲ. ದಿನವಿಡಿ ಸಂಭವಿಸುವ ಸಾಮಾನ್ಯವಾದುವಲ್ಲ ಅದು ಅಪರೂಪದ ಅವತಾರಾದ ಹಾಗೆ ಅಂದರೆ ವಿಶೇಷ ಅನುಭವದಿಂದ ಕಾಣಿಸುವಂತಹದ್ದು. ಎಂದು ಕವನದ ಶ್ರೇಷ್ಠತೆಯನ್ನು ಕುರಿತು ವಿವೇಚಿಸಿರುವುದು ಕಾಣುತ್ತೇವೆ.

**ಈ ಲೇಖನದ ಪ್ರಮುಖ ಅಂಶಗಳು**

* ನನ್ನೊಳಗಿನ ಸುತ್ತಣ ಜಗತ್ತು
* ದೌರ್ಜನ್ಯಕ್ಕೆ ಒಳಗಾದವರ ಬಗ್ಗೆ ಸಹಾನುಭೂತಿಯಿಂದ ಅರಿವು ಮೂಡಿಸಲು
* ೨೪ ವರ್ಷಗಳ ಯುರೋಪಿನ, ಆಫ್ರಿಕದ ಅನುಭವಗಳು
* ಕವನದ ಹುಟ್ಟು ಶ್ರೇಷ್ಠತೆಯ ಬಗ್ಗೆ ಚರ್ಚೆ

# ನಾನೇಕೆ ಬರೆಯುತ್ತೇನೆ?

**ಡಾ. ಜಿ.ಎಸ್. ಶಿವರುದ್ರಪ್ಪ**

ನವೋದಯ ಮತ್ತು ನವ್ಯ ಕಾವ್ಯ ಈ ಎರಡೂ ಬಗೆ ಕವಿತೆಗಳನ್ನು ಬರೆದ ಶಿವರುದ್ರಪ್ಪನವರು ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬರು ಅವರೀಗ ನಮ್ಮ ರಾಷ್ಟ್ರಕವಿ. ನವೋದಯದ ಕಿರಣ ಲೀಲೆ ಕನ್ನಡದೀ ನೆಲದ ಮೇಲೆ ಶುಭೋದಯವ ತೆರೆದಿದೆ ಎಂದು ಹರ್ಷವನ್ನುಂಟು ಮಾಡಿದವರು ಜೊತೆಗೆ ಸಾಹಿತ್ಯ ಚಿಂತಕರು ವಿಮರ್ಶಕರೂ ಎಂದು ಖ್ಯಾತರಾಗಿದ್ದಾರೆ.

ಇವರಿಗೆ ಹೈಸ್ಕೂಲ್ ದಿನಗಳಲ್ಲಿಯೇ ಕವಿಗಳ ಕೃತಿಗಳು ಸಾಹಿತ್ಯದ ಬಗ್ಗೆ ಪ್ರೀತಿ ಆಕರ್ಷಣೆಯತ್ತ ಹಬ್ಬಿಸಿದವು ಎನ್ನುತ್ತಾರೆ. ಹೇಗೆಂದರೆ ಮುಖ್ಯವಾಗಿ ವೆಂಕಟಾಚಾರ್ಯರು, ಬಂಕಿಮಚಂದ್ರರ ಕಾದಂಬರಿಗಳು ಗಳಗನಾಥ, ಅ.ನ.ಕೃ. ಇವರ ಬರಹಗಳು ಓದಿ ಅದರ ಮೇಲೆ ಇನ್ನು ಹೆಚ್ಚು ಒಲವು ಮೂಡಿರಲು ಸಾಧ್ಯವಾಯಿತು. ಹಾಗೆಯೇ ಥಾಮಸ್‌ಗ್ರೆ ಅವರ ಇಂಗ್ಲಿಷ್ ಪದ್ಯದ ಭಾಷೆಯ ಸೊಗಸಿಗೆ ಮಾರು ಹೋಗಿ ತಾವು ಆ ಪದ್ಯವನ್ನು ಕಡಲಿನ ಕತ್ತಲು ಗವಿಯಲ್ಲಿ ಅಡಗಿಹವೆಷ್ಟೋ ರತ್ನಗಳು.... ಕುಸುಮಗಳು ಅನುವಾದ ಮಾಡಿ ಕನ್ನಡ ಅಧ್ಯಾಪಕ ಜಿ.ಪಿ. ರಾಜರತ್ನಂ ಅವರಿಗೆ ತೋರಿದ ಪ್ರಸಂಗ ಆಗ ಅವರಿಗೆ ಇನ್ನು ಬರೆಯಲು ಸ್ಫೂರ್ತಿ ನೀಡಿದರು. ಆ ಕವನದ ಹೆಸರು 'ಸಾಹಿತ್ಯ ನಿಧಿ' ಹೀಗೆ ಭಾಷೆ ಸೊಗಸಿಗೆ ಮಾರು ಹೋದ ಇವರು ಕನ್ನಡದಲ್ಲಿ ತಾವು ಅದೇ ದಾಟಿಯಲ್ಲಿ ಬರೆದು ಕೀರ್ತಿಗೆ ಪಾತ್ರರಾದರು. ಹಾಗೆಯೇ ಬರವಣಿಗೆ ಮುಂದೆ ಸಾಗಿತು.

ಒಂದು ಕವಿತೆಯ ಹುಟ್ಟಿನ ಹಿಂದೆ ಅನೇಕ ಕಾರಣಗಳು ಪ್ರೇರಣೆಗಳೂ, ಪ್ರಭಾವಗಳೂ ಇರುತ್ತವೆ ಎಂಬುದಂತೂ ನಿಜ ಈ ನಿದರ್ಶನಕ್ಕೆ ಹೇಳುವುದಾದರೆ ಈಗ ಪ್ರಸ್ತಾಪಿಸಿದ "ಸಾಹಿತ್ಯ ನಿಧಿ" ಕವಿತೆ ಇಲ್ಲಿ ಇಂಗ್ಲಿಷ್ ಕವಿತೆಯ ಸೊಗಸು ಹಾಗೂ ಇವರೊಳಗಿನ ಸಾಹಿತ್ಯದ ರುಚಿ ಪ್ರೇರಣೆಯಾಗಿರುವುದು ಕಾಣಬಹುದು. ಪ್ರಕೃತಿ, ಪರಿಸರ, ವಾತಾವರಣ ನೋಡಿದ ಪ್ರಸಂಗ ಜೊತೆ ಜೊತೆಗೆ ಸನ್ನಿವೇಶಗಳು ಪ್ರತಿಯೊಂದು ಕಂಡದ್ದನ್ನು ಬರೆಯುವ ಗೀಳು ಕವನದ ಮೂಲಕ ಹಚ್ಚಿಕೊಂಡರು ಹೇಗೆಂದರೆ ಹೂವಿನ ಸೊಗಸನ್ನು ನೋಡಿ ಅದು ಮನಸ್ಸಿನಲ್ಲಿ ಗಾಢವಾದ, ತಾವು ಪಡೆದ ಅನುಭವಗಳನ್ನು ಸಂವಹನಕ್ಕೆ ಸಿದ್ಧಗೊಳಿಸುವಾಗ ಕಾವ್ಯ, ಶರೀರ ನಿರ್ಮಾಣದಲ್ಲಿ ತೊಡಗಿದಾಗ ಪರಿಚಿತ ಲೋಕವನ್ನು ಇಂದ್ರಿಯ ಗಮ್ಯ ಲೋಕವನ್ನಾಗಿ ಸಂವೃದ್ಧಗೊಳಿಸಿದ್ದಾರೆ.

ಲೋಕದ ಇಂದ್ರಿಯ ಗಮ್ಯ ಘಟಕಗಳು, ಅದರಲ್ಲಿ ಕವಿ ಕಂಡ ಘಟಕಗಳು ಭಾವಾರ್ಥಗಳಿಗೆ ಪ್ರತೀಕವಾಗಿ ಸಂಕೇತಗಳಾಗಿ ಕವನದ ಮೈಯಾಗುತ್ತವೆ. ಈ ರೀತಿ

ಮಂಡಿತವಾದ "ಭಾವ" ಲೋಕಾನುಭವಕ್ಕೆ ಕವಿಯ ಪ್ರತಿಕ್ರಿಯೆಯೂ ಆಗಿರುವಂತೆ, ಕವಿಯ ದೃಷ್ಟಿಕೋನವು ಆಗಿರುತ್ತದೆ. ಅಂದರೆ ಕವಿತೆಗಳು ಕವಿಯ ಮೂಲಕ ಲೋಕವನ್ನು ಒದಗಿಸುವಾಗ ಕವಿಯ ದೃಷ್ಟಿಯನ್ನು ಬೆರೆಸಿಕೊಂಡೆ ಮೈದಳೆದಿರುತ್ತದೆ.

ಉದಾ: ತಾವೇ ಹೇಳಿದಂತೆ ಹೂವಿನ ಸೊಗಸು ಮನಸ್ಸಿನಲ್ಲಿ ತಂಗಿದ್ದನು
ನೋಡು ಇದೊ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸುರಗಿಡದಿಂದಂತು
ಮಾಡಿತೊ ಬೆಳ್ಳಗೆ[೬]

ಕಾಲೇಜಿನಿಂದ ಮನೆಗೆ ಹೋಗುತ್ತಿದ್ದಾಗ ಉದ್ದನೇಯ ಹಾಗೂ ಕಪ್ಪಗಿನ ಜಡೆ ಇವರ ಮನಸ್ಸಿಗೆ ಆಕರ್ಷಿಸಿ "ಅದೇ ಪ್ರೇರಣೆ ಎಂಬಂತೆ" "ಲಲನೆಯ ಬೆನ್ನಿನೆಡೆ ಹಾವಿನೊಲು ಜೊಲ್ವ ಜಡೆ" ಎಂಬ ಕವಿತೆ ಹೀಗೆ ತಾವು ನೋಡಿದ ಪ್ರತಿಯೊಂದು ಪ್ರಸಂಗವನ್ನು ತಮ್ಮ ಕವಿತೆಗೆ ಪೂರಕ ಸಾಮಗ್ರಿಯಂತೆ ಬಳಸಿಕೊಂಡಿರುವುದನ್ನು ನೋಡಿದರೆ ಇವರೊಬ್ಬ ಸಾಮಾನ್ಯ ಕವಿಯಲ್ಲ ಎಂಬ ಅಂಶ ಮನಗಾಣಬಹುದು. ತಾವು ಪಡೆದ ಅನುಭವಗಳನ್ನು ಸಂವಹನಕ್ಕೆ ಸಿದ್ಧಗೊಳಿಸುವಾಗ ಕಾವ್ಯ ಶರೀರ ನಿರ್ಮಾಣದಲ್ಲಿ ತೊಡಗಿದಾಗ ಪರಿಚಯ ಲೋಕವನ್ನು ಸಮೃದ್ಧವಾಗಿ ಬಳಸುತ್ತಾರೆ. ಈ ಅಂಶಗಳನ್ನು ಗಮನಿಸಿದಾಗ ಕವಿತೆ ಎನ್ನುವುದು ಕೆಲವು ಲೋಕ ಘಟನೆಗಳಿಗೆ ತೋರುವ ತತ್‌ಕ್ಷಣದ ಪ್ರತಿಕ್ರಿಯೆಗಳಿಂದ ಕೆಲವುವೇಳೆ ಗಾಢವಾದ ಚಿಂತನೆಯಿಂದ ಕೆಲವು ವೇಳೆ ಬಹುಕಾಲದ ಪರಿ ಭಾವನೆಯಿಂದ, ನಿಗೂಢ ನೆಲೆಯಿಂದ ಹುಟ್ಟುತ್ತವೆ ಎಂಬ ಅಂಶ ತಿಳಿಯಬಹುದು ಆ ಮೂಲಕ ಇಲ್ಲಿ ಶಿವರುದ್ರಪ್ಪನವರು ಅನುಭವಗಳನ್ನು, ಭಾವನೆಗಳನ್ನು, ಚಿಂತನೆಗಳನ್ನು ಕವಿತೆಯ ಮಾಧ್ಯಮದಲ್ಲಿ ಹೊರ ಹಾಕುವುದು ನನಗೆ ದತ್ತವಾಗಿರುವುದರಿಂದ ಸುತ್ತಣ ಸಮಾಜದೊಂದಿಗೆ ಇವನ್ನು ಹೊರಹಾಕಲು ನೆರವಾಗಿಸಿಕೊಂಡಿದ್ದಾರೆ. ಜೊತೆಗೆ ನಾನೇಕೆ ಬರೆಯುತ್ತೇನೆ ಎಂಬುದನ್ನು ಕುರಿತ ಕವಿತೆಯೊಂದು ಬರೆಯುವರ ಮೂಲಕ ಉತ್ತರ ನೀಡಿದ್ದಾರೆ ಅದೇ ಈ ಕವಿತೆ.

ಉದಾ: ನಾನು ಬರೆಯುತ್ತೇನೆ
ಸುಮ್ಮನೆ ಇರಲಾರದಕ್ಕೆ
ನನ್ನ ವೇದನೆ ಸಂವೇದನೆಗಳನ್ನು ಕ್ರಿಯೆ ಪ್ರಕ್ರಿಯೆಗಳನ್ನು
ದಾಖಲು ಮಾಡುವುದಕ್ಕೆ
ನಿಂತ ನೀರಾಗದೆ ಮುಂದಕ್ಕೆ ಹರಿಯುವುದಕ್ಕೆ
ಎಲ್ಲವರ ಜತೆ ಬೆರೆಯುವುದಕ್ಕೆ[೭]

ಅಂದರೆ ಇವರು ಸುಮ್ಮನೆ ಕೂಡಲಾರದೆ ಮಾನವ ಹುಟ್ಟಿದ ಮೇಲೆ ಏನಾದರೂ ಸಾಧನೆ ಮಾಡಬೇಕೆನ್ನುವ ಹಂಬಲ ತಾವು ಇತರ ಕವಿ ಬೇಂದ್ರೆ, ಕುವೆಂಪು ತರಹ ಬರಹಕ್ಕೆ ಕೈ ಹಾಕಿದರು. ಅಷ್ಟೆ ಅಲ್ಲದೆ ತಮ್ಮೊಳಗಿನ ದುಃಖ, ಚಿಂತೆ, ಗ್ರಹಿಕೆ, ಭಾವನೆ, ಅನಿಸಿಕೆ

ಇವುಗಳನ್ನು ದಾಖಲು ಮಾಡಿ ಇಡುವುದಕ್ಕಾಗಿ ಏಕೆಂದರೆ ಅದರ ಉಪಯೋಗ ಎಲ್ಲರೂ ಪಡೆದುಕೊಳ್ಳಲು ಜೊತೆಗೆ ಎಲ್ಲರೊಟ್ಟಿಗೆ ಬೆರೆಯುವುದಕ್ಕೆ ಬರೆಯುತ್ತಾರೆ. ತಮ್ಮನ್ನು ತಾವು ತಿಳಿದುಕೊಳ್ಳಲು, ಕಂಡುಕೊಳ್ಳಲು ಜೊತೆಗೆ ಬರೆದದ್ದನ್ನು ಸಹೃದಯರಿಗೆ ಕೊಟ್ಟ ನಂತರ ಅದರ ಒಳಿತು ಕೆಡಕುಗಳನ್ನು ತಿಳಿದುಕೊಳ್ಳಲು ಸಂವಾದ ಮಾಡಲು ಬರೆಯುತ್ತೇನೆ ಮತ್ತು ಕೊನೆಯದಾಗಿ ಎಲ್ಲರಿಗೂ ಇರುವಂತೆ ಒಬ್ಬ ಕವಿಯಾದವನಿಗೆ ಖುಷಿಯಾದಾಗ, ನೋವಾದಾಗ ಅವುಗಳನ್ನು ಹೊರಹಾಕಲು ಬರಹ ಕೈಗೊಂಡಿರುವಂತೆ ಇವರು ಸಹ ಬರೆದಿದ್ದಾರೆ. ಹೀಗೆ ಈ ಲೇಖನವು ತಾವು ಬರಹಕ್ಕೆ ಕಾರಣವಾದ ಅಂಶಗಳನ್ನು, ಸಂಗತಿಗಳನ್ನು ಬಾಲ್ಯದ ನೆನಪುಗಳೊಂದಿಗೆ ಇದರಲ್ಲಿ ಮನದಾಳದ ಮಾತನ್ನು ಬಿಚ್ಚಿಟ್ಟಿದ್ದಾರೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ವೆಂಕಟಾಚಾರ್ಯ, ಬಂಕಿಂಚಂದ್ರ, ಗಳಗನಾಥ, ಅ,ನ,ಕೃ. ಇವರ ಕಾದಂಬರಿಗಳ ಓದು
* ಥಾಮಸ್‌ಗ್ರೆ ಅವರ ಇಂಗ್ಲಿಷ್ ಪದ್ಯದ ಸೊಗಸು
* ಪರಿಸರದಲ್ಲಿ ಹಾಗೂ ವಾತಾವರಣದಲ್ಲಿ ನೋಡಿದ ಅನುಭವಗಳು
* ಸಂವೇದನೆಗಳನ್ನು ಹೊರಹಾಕಲಿಕ್ಕೆ ದಾಖಲು ಮಾಡುವುದಕ್ಕೆ
* ಸಾಧನೆ ಮಾಡಬೇಕೆನ್ನುವ ಹಂಬಲ
* ಬಾಲ್ಯದ ನೆನಪುಗಳೊಂದಿಗೆ ಮನದಾಳದ ಮಾತು

# ನಾನೇಕೆ ಬರೆಯುತ್ತೇನೆ

**ಯಶವಂತ ಚಿತ್ತಾಲ**

ಕೆಲವು ಲೇಖಕರು ತಮ್ಮನ್ನು ರೂಪಿಸಿದ ಹಾಗೂ ತಾವೇ ರೂಪಿಸಿದ ಸಾಹಿತ್ಯದ ಚಳುವಳಿಯ ಗುಣ ಮತ್ತು ಪರಿಮಿತಿಗಳಿಂದ ಬದ್ಧರಾಗಿ ಅವರ ಚೌಕಟ್ಟಿನಲ್ಲಿ ಅನನ್ಯ ಸಾಧನೆ ಮಾಡುತ್ತಾರೆ. ಇನ್ನು ಕೆಲವರು ಚಳುವಳಿಗಳಿಂದ ಪೋಷಣೆ ಪಡೆದು ಅದರ ಸೀಮಿತಗಳನ್ನು ಬೆಳೆಯುತ್ತಾರೆ. ತಮ್ಮ ಭಾಷೆಯ ಒಟ್ಟು ಸಾಹಿತ್ಯ ಪರಂಪರೆಯ ಭಾಗವಾಗಿ ಬಿಡುತ್ತಾರೆ. ತಮ್ಮ ಕಾಲದ ಜೀವನವನ್ನು ಕುರಿತಾದ ಪ್ರಬುದ್ಧ ಕಾಳಜಿಗಳು ಮತ್ತು ತಾವು ಆರಿಸಿಕೊಂಡ ಸಾಧ್ಯತೆಗಳನ್ನು ವಿಸ್ತರಿಸಬಲ್ಲ ಪ್ರತಿಭೆಯ ಫಲವಾಗಿ ಕನ್ನಡ ಕಥಾ ಸಾಹಿತ್ಯದ ಪ್ರಮುಖರಲ್ಲಿ ಒಬ್ಬರಾಗಿರುವ ಯಶವಂತ ಚಿತ್ತಾಲರು ಎರಡನೆ ಗುಂಪಿಗೆ ಸೇರಿದವರು. ಸಣ್ಣ ಕಥೆ ಕಾದಂಬರಿಗಳ ವಸ್ತು, ಭಾಷೆ, ಪಾತ್ರ ಎಲ್ಲದರಲ್ಲೂ ಹೊಸ ಆಯಾಮ ನೀಡಿ ಅದಕ್ಕೊಂದು ಸಮಗ್ರತೆ ತಂದು ಕೊಟ್ಟ ಕೀರ್ತಿ ಇವರಿಗೆ ಸಲ್ಲುತ್ತದೆ.

ಇಲ್ಲಿ ನಾನೇಕೆ ಬರೆಯುತ್ತೇನೆ ಎಂಬ ಪ್ರಶ್ನೆಗೆ ಉತ್ತರ ಹುಡುಕುವುದಕ್ಕಿಂತ ಪೂರ್ವ ಚಿತ್ತಾಲರು ತಾವು ಓದುವುದು ಯಾಕೆ ಎಂಬ ಪ್ರಶ್ನೆ ಕಂಡುಕೊಳ್ಳುವುದು ಸಮಂಜಸವಾದೀತೇನೊ ಈ ಅಂಶವನ್ನು ಪರಿಶೀಲಿಸಿದಾಗ ಬರವಣಿಗೆಗೆ ಒಂದು ಶಕ್ತಿ ಇದೆ. ಬದಲಾವಣೆ ಮಾಡುವ ತಾಕತ್ತಿದೆ, ಹಾಗೆಯೇ ಇವುಗಳನ್ನು ತಿಳಿದುಕೊಳ್ಳಲು ಓದುವುದು ಅನಿವಾರ್ಯ ಯಾಕೇ ಬದುಕಬೇಕು? ಎನ್ನುವುದಕ್ಕಿಂತ ಹೇಗೆ ಬದುಕಬೇಕು ಎಂಬುದು ಪ್ರಮುಖ ಅಂಶ. ಇದನ್ನು ಅರಿಯಲು ಹೋದಾಗ ಮಾನವೀಯ ಗುಣಗಳಿಂದ ಬದುಕಬೇಕಾಗುವುದು ಉದ್ಭವವಾಗುತ್ತವೆ. ಹೀಗೆ ಬದುಕಿಗೂ ಓದಿಗೂ ಅರ್ಥ ಕಲ್ಪಿಸಿ ಬರೆಯುವವರ ಬಗ್ಗೆ ತಿಳಿಸಿ ಹೇಳಿದ್ದಾರೆ.

ಸಾಹಿತ್ಯದಿಂದ ಬರೆಯಬಹುದಾದ ದೊಡ್ಡ ಲಾಭವೆಂದರೆ ಮನಸ್ಸು ಅರಳುವಿಕೆ ಜೊತೆಗೆ ಬೆಳೆದ ರೀತಿ ಹಾಗೂ ಇತರ ಜ್ಞಾನ ಲಭ್ಯದ ಜೊತೆಗೆ ಉತ್ತಮ ಗೆಳೆಯರು ದೊರೆಯುವಿಕೆಗಾಗಿ ತಾವು ಆ ಅರ್ಥದಲ್ಲಿ ಬರೆಯುತ್ತಾರೆ. ಹಾಗೂ ಬರೆಯುವ ಅನುಭವ ಸೃಷ್ಟಿಸುವ ಅನುಭವ, ಬದುಕಿನ ಅರ್ಥ ಪೂರ್ಣತೆಗಾಗಿ ಬರೆಯುವ ಹಂತಕ್ಕೆ ತಲುಪುತ್ತಾರೆ.

ಅಂದರೆ ಅನುಭವವನ್ನು ಹಿಡಿದಿಡುವ ಹಾಗೂ ಜೀವನದ ಅರ್ಥ ತಿಳಿವಿಗಾಗಿ ತಾವು ಬರೆದಿರುವವುದು ಕಾಣಬಹುದು ಅಮೂರ್ತವಾದ ಸಮಾಜದಲ್ಲಿ ನನ್ನ ವೈಯಕ್ತಿಕ ಇರುವಿನ ಪ್ರಸ್ತುತೆಯನ್ನು ಕಂಡುಕೊಳ್ಳುವುದಕ್ಕಾಗಿ ಬರೆಯುತ್ತೇನೆ ಎಂದು ತಾವೇ ಹೇಳುತ್ತಾರೆ. ಅಂದರೆ ಕಾಣದೆ ಇರುವ ಈ ಸಮಾಜದಲ್ಲಿ ತಾವು ಒಂದು ಬರವಣಿಗೆಯ ಮೂಲಕ ವಿಶಿಷ್ಟತೆಯನ್ನು ತೋರ್ಪಡಿಸುವುದಕ್ಕಾಗಿ ತಮ್ಮ ಅಗತ್ಯತೆಯನ್ನು ಕಂಡುಕೊಳ್ಳುವ ಹಾಗೂ ತಾವು ಬರೆಯುತ್ತಿದ್ದು

ತಮ್ಮನ್ನು ತಾವು ತಿಳಿಯಲು ಹಾಗೂ ಉಳಿದವರೊಡನೆ ಪ್ರೀತಿಸಲು ಪ್ರಿತಿಸುವುದನ್ನು ಕಲಿಯುವುದರ ಮೂಲಕ ಬರೆಯುತ್ತಾರೆ ಏಕೆಂದರೆ ಬರವಣಿಗೆಗೆ ಅಂತಹ ಶಕ್ತಿ ಇವೆ. ಅದರಿಂದ ಇಡೀ ಜಗತ್ತನ್ನು ಗೆಲ್ಲಬಹುದು ಸಮಾಜವೇ ತನ್ನತ್ತ ನೋಡುವಂತೆ ಮಾಡಬಹುದು ಅಂತಹ ಪ್ರಬಲವಾದ ಶಕ್ತಿ ಬರವಣಿಗೆಯಲ್ಲಿ ತುಂಬಿಕೊಂಡಿವೆ.

ತಾವು ಬರೆಯುವುದು ಅವರ ಮನಸ್ಸಿನ ಸ್ವಸ್ಥ್ಯಕ್ಕಾಗಿ ಅದನ್ನು ಶುದ್ಧವಾಗಿ ಇಟ್ಟುಕೊಳ್ಳಲು ಬರಹ ಹೊರಹಾಕುತ್ತೇನೆ ಎನ್ನುತ್ತಾರೆ. ಇಲ್ಲಿ ಸ್ವಾಸ್ಥ್ಯ ಎನ್ನುವುದು ನೆಮ್ಮದಿ ಎಂಬ ಅರ್ಥಕೊಡುತ್ತದೆ.. ಭಾವ ಪ್ರಪಂಚ, ಮಾನಸಿಕ ಪ್ರಪಂಚದ ಮೂಲಕ ಸಾಹಿತ್ಯ ಅಭಿವ್ಯಕ್ತಿಯ ಮಾಧ್ಯಮವಾಗಿ ಬಳಸಿಕೊಂಡಿರುವುದು ಕಾಣುತ್ತೇವೆ.

ಸಾಹಿತ್ಯದಿಂದ ಸಮಾಜಕ್ಕೆ ಏನು ಉಪಯೋಗ ಎಂದು ಕೇಳುವ ಜನಕ್ಕೆ ಸಾವು ಮರು ಸವಾಲೊಂದನ್ನು ಕೇಳಬೇಕಾಗುತ್ತದೆ. ಅದೇನೆಂದರೆ ಸಮಾಜವನ್ನು ಕುರಿತು ಅಂತಹ ಸಮಾಜದ ಜೀವಂತ ಘಟಕವಾದ ಮಾನವನನ್ನು ಕುರಿತು ಇವರು ಮಾಡಿಕೊಂಡ ಕಲ್ಪನೆಯಾದರೂ ಏನು ಎಂದು ಹಾಗೂ ಸಾಹಿತ್ಯ ಸಮಾಜದಲ್ಲಿ ವಹಿಸಿವ ಪಾತ್ರದ ಬಗ್ಗೆ ಕುರಿತು ಚರ್ಚಿಸಿದ್ದಾರೆ. ಯಾವರೀತಿ ಎಂದರೆ ಇದರಿಂದ ಮನುಷ್ಯನ ಜೀವನಕ್ಕೆ ಅರ್ಥ ತಂದುಕೊಡುತ್ತದೆ. ಏಕೆಂದರೆ ಸಾಹಿತ್ಯಕ್ಕೆ ತಿಳಿಸಿ ಹೇಳುವ ಶಕ್ತಿ ಹೊಂದಿದೆ. ಭಾವನೆಗಳನ್ನು ಹೊರ ಹೊಮ್ಮುವುದರ ಮುಖಾಂತರ ಭಾವನೆಗಳು ಬಲಿಷ್ಠಗೊಳ್ಳುತ್ತವೆ. ಹಾಗಾಗಿ ಸಾಹಿತ್ಯ ಪಾತ್ರದ ಚರ್ಚೆಮಾಡಿ ಆ ಮೂಲಕ ಸಾಹಿತ್ಯ ರಚಿಸುತ್ತೇನೆ. ಅವು ಸಮಾಜದ ಬೆಳವಣಿಗೆಗೆ ಪೂರಕವಾಗುವ ದೃಷ್ಟಿಕೋನದಲ್ಲಿ ಇವರ ಸಾಹಿತ್ಯ ಸಾಗುತ್ತವೆ.

ಹೀಗೆ ಒಟ್ಟಾರೆ ಈ ಲೇಖನದಲ್ಲಿ ಬದುಕು, ಓದುವುದು, ಈ ಮೂಲಕ ಸಾಹಿತ್ಯವನ್ನು ಕಟ್ಟಿಕೊಂಡು ಅರ್ಥಪೂರ್ಣ ಹುಟ್ಟು ವಿಕಾಸದ ಅಂಶಗಳು ವೈಯಕ್ತಿಕ ಇರುವಿನ ಪ್ರಸ್ತುತತೆ ಅರ್ಥ ಪೂರ್ಣವಾಗುವ ಸೃಷ್ಟಿಕಾರ್ಯ ತಮ್ಮನ್ನು ತಾವು ತಿಳಿದುಕೊಳ್ಳಲ್ ಹಾಗೂ ಮನಸ್ಸಿನ ಸ್ವಾಸ್ಥ್ಯಕ್ಕಾಗಿ ತಾವು ಸಾಹಿತ್ಯ ರಚಿಸುವುದು ಕಂಡುಬರುತ್ತದೆ. ಹಾಗಯೇ ಸಾಹಿತ್ಯದಿಂದ ಸಮಾಜಕ್ಕೆ ಯಾವ ರೀತಿ ಉಪಯೋಗ ಹಾಗೂ ಅದರ ಪಾತ್ರದ ಬಗ್ಗೆ ಕುರಿತು ಚರ್ಚೆ ಈ ಲೇಖನದಲ್ಲಿ ಕಾಣಬಹುದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಬರವಣಿಗೆಗೆ ಬದಲಾವಣೆ ಮಾಡುವ ಶಕ್ತಿ ಇರುವುದರಿಂದ
* ಜ್ಞಾನದ ಲಭ್ಯದ ಜೊತೆಗೆ ಉತ್ತಮ ಗೆಳೆಯರು ದೊರೆಯುವಿಕೆ
* ವಕ್ತಿಕ ಇರುವಿಕೆಯ ಪ್ರಸ್ತುತತೆ ಹಾಗೂ ತಮ್ಮನ್ನು ತಾವು ಕಂಡುಕೊಳ್ಳುವಿಕೆಗಾಗಿ
* ಮನಸ್ಸಿನ ಸ್ವಾಸ್ಥ್ಯಕ್ಕಾಗಿ
* ಸಾಹಿತ್ಯ ಕುರಿತು, ಅದರ ಪ್ರಭಾವದ, ಪಾತ್ರದ ಚರ್ಚೆಯ ಅಂಶಗಳು

# ನನ್ನ ಲೇಖನೋದ್ಯೋಗ

ಡಾ. ಯು.ಆರ್. ಅನಂತಮೂರ್ತಿ

ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಕಥೆ, ಕಾದಂಬರಿ, ನಾಟಕ, ಕಾವ್ಯ, ಅನುವಾದ ಸಂಪಾದನೆಗಳ ಮೂಲಕ ಅನಂತಮೂರ್ತಿ ಯವರು ಸಲ್ಲಿಸಿದ ಸೇವೆ ಅಮುಲ್ಯವಾದುದು. ಸಮಕಾಲೀನ ವಾಸ್ತವ ದ್ವಂದ್ವಗಳಿಗೆ ಏಕಕಾಲದಲ್ಲಿ ಒಳಗಿನವರಂತೆ ಆಪ್ತವಾಗಿಯೂ ಹೊರಗಿನವರಂತೆ ವಿಶ್ಲೇಷಣಾತ್ಮಕವಾಗಿಯೂ ಸಮಕಾಲೀನ ಸಮಸ್ಯೆಗಳ ಬಗ್ಗೆ ಚಿಂತಿಸುವ ಕನ್ನಡ ಸಂಸ್ಕೃತಿ ಕಂಡ ವಿಶಿಷ್ಟ ಪ್ರತಿಭೆ . ನವ್ಯದವರಾದ ಇವರು ತಮ್ಮ ಹಿರಿಯರ ಕಾವ್ಯ ಮಾರ್ಗದಿಮದ ಹೊರಳಿಕೊಂಡು ಅವರನ್ನು ಟಿಕಿಸುತ್ತಾ ತಮ್ಮದೇ ಆದ ನವ್ಯ ಮಾರ್ಗವನ್ನು ಸ್ಥಾಪಿಸಿದ್ದೆವೆಂದು ಪ್ರಾರಂಭದಲ್ಲಿ ಪ್ರಸ್ತಾಪಿಸುತ್ತಾರೆ. ಅಂದರೆ ಅವರ ಬರಹಗಳು ಕೇವಲ ಪ್ರಕೃತಿ ಪ್ರೀತಿ, ಪ್ರೇಮ, ರಾಷ್ಟ್ರ ಚಿಂತನೆಗಳಿಂದ ತುಂಬಿದೆ ಅದಕ್ಕಿಂತಲು ಹೊರತಾದ ನವ್ಯ ಹೊಸತನವನ್ನು ಬರೆಯಲು ಅಂದರೆ ವಾಸ್ತವ ಪ್ರಪಂಚ ಮಾನವ ಕೇಂದ್ರವುಳ್ಳ (humanist) ಧೋರಣೆಯಾಗಿ ರೂಪುಗೊಳ್ಳಬೇಕೆಂದು ಜೀವನವನ್ನು ಗಂಭಿರವಾಗಿಯೇ ನೋಡಿದರು. ಅನುಭವಗಳ ನಿಜಸ್ವರೂಪ ಏನೆಂದೂ ಹುಡುಕಾಡಿ ಬರೆದರು. ಹೊಸದನ್ನು ಅನ್ವೇಷಿಸಿ ಬರೆಯುವದಾಗಿತ್ತು ಇವರ ಲೇಖನ ಹಾಗೂ ಬರವಣಿಗೆ

ಈ ಲೇಖನದಲ್ಲಿ ಪರಂಪರೆ ಹಾಗೂ ಆಧುನಿಕತೆ ಕುರಿತಾದ ಸಂಬಂಧವನ್ನು ಹೋಲಿಸುವುದರ ಜೊತೆಗೆ ತಮ್ಮ ಬರಹವು ವ್ಯಾಸ ವಾಲ್ಮಿಕಿಗಳು ಇಲ್ಲದೆ ಕಾಳಿದಾಸ ಇಲ್ಲ. ಕಾಳಿದಾಸನಿಲ್ಲದೆ ಪಂಫನು ಇಲ್ಲ ಪಂಪ ಕುಮಾರವ್ಯಾಸರಿಲ್ಲದೆ ಕುವೆಂಪು ಪುತಿನವಿಲ್ಲ. ಹಾಗಾಗಿ ಒಂದರ ಹಿಂದೆ ಒಂದು ಜೋತು ಬೀಳುವುದರ ಜೊತೆಗೆ ಪರಂಪರೆಯ ಜಿತೆ ಜಗಳವಿಲ್ಲದೆ ಸೃಜನಶೀಲ ಹುಟ್ಟಲ ಹೇಗೆ ಸಾಧ್ಯವಿಲ್ಲವೋ ಹಾಗೆ ಪೂರ್ವಾಪರ ಅಂಶಗಳು ಅವಶ್ಯಕವೆಂಬುವುದನ್ನು ಈ ಸಾಲು ತೋರಿಸುತ್ತದೆ. ಸೃಜನಶೀಲ ಹಾಗೂ ಸಾಹಿತ್ಯವಿನಯ ಕುರಿತು ಇಲ್ಲಿ ಪ್ರಸ್ತಾಪಿಸುತ್ತಾರೆ. ಅಂದರೆ ಬರವಣಿಗೆ ಸೃಜನಶಿಲ ಹಾಗೂ ಸಾಹಿತ್ಯದಲ್ಲಿ ವಿನಯತೆ ಮಾಡುವಂತೆ ಬರೆಯಬೇಕು ಎಂಬ ಅಂಶ ವ್ಯಕ್ತ ಪಡಿಸಿರುವುದು ಕಾಣಬಹುದು. ಎಲ್ಲಾ ಭಾಷೆಯೂ ನಮ್ಮ ಹಿಂದಿನವರು ಬೆಳಿಸಿದ್ದು; ಮತ್ತು ನಮ್ಮ ನಮ್ಮ ಸಾವನ್ನು ನಮಗೆ ಪ್ರಿಯವಾದವರಸಾವನ್ನು ಎದುರಿಸುವುದರಲ್ಲಿ ಇರುವ ದು:ಖ ಇವೆಲ್ಲವೂ ನಮಗೆ ಎದುರಾಗುವ ಸದ್ಯದ್ದೋ ಅಷ್ಟೆ ನಮ್ಮ ಭಾಷೆಯಲ್ಲಿ ನಮ್ಮ ಸಧ್ಯಕ್ಕೆ ಒದಗಿಬರುವಂತೆ ದಖಲಾಗಿದ್ದು ಏಕಾಕಿತನದ ಭಾವನೆಯ ಹೊತ್ತಿನಲ್ಲಿ ನಾವು ಸಮಷ್ಟಿಯ ಒಂದು ಅಂಗವೂ ಎನ್ನಿಸುವುದನ್ನು ಮಾಡುವುದು ಒಂದು ಭಾಷೆಯ ಸಾಹಿತ್ಯದ ಪರಂಪರೆಯ ಕುರಿತು ತಾವು ಬರೆಯುವುದು ಉದ್ಯೋಗವೇ ಎಂದು ಹೇಳುವಲ್ಲಿ ಪಂಪ ಆದಿಯಾಗಿ ಬರುವ ಇತ್ತಿಚಿನ

ಕುವೆಂಪು, ಬೇಂದ್ರೆ, ಕಾರಂತ, ಮಾಸ್ತಿ, ಗೋಕಾಕ್ ಅವರಲ್ಲಿ ತಾವು ಒಬ್ಬರಾಗುವುದನ್ನು ಅತ್ಯಂತ ವಿನಯದಿಂದ ಒಪ್ಪಿಕಪಳ್ಳುವುದರ ಜೊತೆಗೆ ಆ ಮೂಲಕ ಬರವಣಿಗೆ ಪ್ರಾರಂಭಿಸುವುದು ಕಾಣಬಹುದು. ಮಡಿವಂತ ಬ್ರಾಹ್ಮಣ ಕುಟುಂಬದಿಂದ ಬಂದದ್ದರಿಂದ ಅಲ್ಲಿಯ ಸಂಸ್ಕೃತಿ ಮತ್ತು ಸಮಾಜದ ಕೆಲವು ಕ್ರೂರ ಸತ್ಯಗಳನ್ನು ಕಂಡು ಹೊರಹಾಕಲು ಬರವಣಿಗೆ ಕೈಗೊಂಡಿರಲು ಸಾಧ್ಯವಾಗಿರಬಹುದು. ಅವರು ಅಗ್ರಹಾರಗಳಲ್ಲಿ ಕೈಬರಹದ ಪತ್ರಿಕೆಯೊಂದನ್ನು ಗೆಳೆಯರೊಡನೆ ಕೂಡ ಹೊರತರಲು ಪ್ರಾರಂಭಿಸಿದ್ದರು. ಅದರಲ್ಲಿ ತಾವು ನಾನೊಂದು ಕತೆ ಬರೆದಿದ್ದೇನೆಂದು ಈ ಕತೆ. ಕ್ಲಿಷ್ಟ ರೂಪಕಗಳಲ್ಲಿ ಬರೆಯುವದಾಗಿತ್ತು. ಯಾಕೆಂದರೆ ನೇರವಾಗಿ ನನ್ನ ಮನಸ್ಸಿನಲ್ಲಿರುವುದನ್ನು ಬರೆದು ಹಿರಿಯರ ಕೋಪಕ್ಕೆ ತುತ್ತಾಗುವಷ್ಟು ಧೈರ್ಯ ನನ್ನಲ್ಲಿರಲಿಲ್ಲ. ಈ ಅಂಶವು ಕತೆಗೆ ಪ್ರೇರಣೆ ನೀಡಿದೆ. ಮತ್ತು ಪ್ರಭಾವ ಬೀರಿದೆ.

ಹರಿಜನರು ಸಾಯಲು ತೊಡಗಿದಾಗ ಸುಂದರಳಾದ ಒಬ್ಬಳು ಅಸ್ಪೃಶ್ಯ ಹುಡುಗಿ ಕೇರಿಯನ್ನು ತೊರೆದು ಓಡಿಹೋಗಿದ್ದಳು. ಈ ಪ್ರಸಂಗ ಬಾಲ್ಯದಲ್ಲಿ ಕತೆ ಬರೆಯಲು ಪ್ರೇರಣೆನೀಡಿತು. ಎಲ್ಲಾ ಲೇಖಕರಿಗೂ ಬಾಲ್ಯದ ಘಟನೆಗಳು ತಮ್ಮ ಬರಹಕ್ಕೆ ಸ್ಫೂರ್ತಿದಾಯಕವಾಗಿ ಸಹಾಯಕವಾಗಿವೆ. ಹಾಗೆಯೇ ಈ ಲೇಖಕರಿಗೂ ಹೊರತಾಗಿಲ್ಲ. ಹೈಸ್ಕೂಲ್ ದಿನಗಳಲ್ಲಿ ಬರೆದ ಕತೆ ಮತ್ತೋಮ್ಮೆ ಬರೆಯುವಂತೆ ಮಾಡಿತು. ಅದೇ ಇವರ ಸಂಸ್ಕಾರ ಕಾದಂಬರಿ ಹಾಗಾದರೆ ಆ ಸನ್ನಿವೇಶ ಘಟನೆಗಳು ಅತ್ಯಂತ ಪ್ರಭಾವಿತವಾಗಿ ಪರಿಣಾಮಬಿರಿರುವುದರಿಂದ ಸಾಹಿತ್ಯವನ್ನು ರಚಿಸಿದರು.

ತಮ್ಮ ಅಸ್ತಿತ್ವವನ್ನು ರೂಪಿಸುತ್ತಿದ್ದ ಸಾಮಾಜಿಕ ಸಾಂಸ್ಕೃತಿಕ ನಂಬಕೆಗಳನ್ನು ಪ್ರಶ್ನಿಸುತ್ತಿದ್ದರು.[೧೦] ಅಂದರೆ ಮಡಿವಂತಿಕೆ, ಆಚಾರ, ವಿಚಾರ, ನಂಬಿಕೆಗಳು ಏಕೆಂದರೆ ಇವರೆಲ್ಲರಿಗೂ ಗಾಂಧಿಯ ಪ್ರಭಾವ ಆಗಿರಲೇಬೇಕು. ಜೊತೆಗೆ ಹಿರಿಯ ಲೇಖಕರ ಕಾದಂಬರಿಗಳನ್ನು ಓದಿಕೊಂಡಿದ್ದರಿಂದ ಅದರೊಳಗಿನ ಒಂದು ಒಳಬದುಕು ಲೇಖನಕ್ಕೆ ಪ್ರೇರಾಣಾತ್ಮಕ ಅಂಶ ಗುರುತಿಸಬಹುದು. ಇವರ ಸುತ್ತಲಿನ ಪರಿಸರದಲ್ಲಿ ಪೌರಾಣಿಕ ಪ್ರಪಂಚ ಮತ್ತು ವಾಸ್ತವಿಕ ಪ್ರಪಂಚ ಬದುಕು ಇವರು ಒಬ್ಬ ಲೇಖಕನಾಗಲು ಸ್ಫೂರ್ತಿ ಕಾರಣ ಪೌರಾಣಿಕ ಅಂಶಗಳಾದ ರಾಮಾಯಣ, ಮಹಾಭಾರತದ ವ್ಯಕ್ತಿಗಳನ್ನು ಕುರಿತು ಆಗಬರೆದ ಕೃತಿಗಳು ಜೊತೆಗೆ ವಾಸ್ತವದ ಸಮಾಜದೊಳಗಿನ ಅನಿಷ್ಠ ಪೀಡೆಗಳನ್ನು ಹೊರ ಹಾಕಲು ಲೇಖನವನ್ನು ಉದ್ಯೋಗವನ್ನಾಗಿಸಿಕೊಂಡು ಕಾರ್ಯ ನಿರತರಾಗಿರುವುದು ಕಾಣಬಹುದು. ಇವರು ಗಣಿತ ಶಾಸ್ತ್ರಜ್ಞನಾಗಿ ರಾಮ, ಮನೋಹರ. ಲೋಹಿಯಾರ ಅನಿಯಾಯಿಗಳ ಅವರ ಕುರಿತಾದ ಅಂಶಗಳ ವಿವರಣೆಯಿಂದ ಪ್ರಭಾವಕ್ಕೆ ಒಳಗಾಗಿ ಜೊತೆಗೆ ರೈತ ಸತ್ಯಾಗ್ರಹದಲ್ಲಿ ಭಾಗಿಯಾದ ಪ್ರಸಂಗ ಹಾಗೂ ತಾವು ಒಬ್ಬ ಬ್ರಾಹ್ಮಣ ಕುಲವಾಗಿದ್ದರಿಂದ , ಮಠದಲ್ಲಿ ನಡೆಯುತ್ತಿದ್ದ ಸಂಜೆಯ ದೀರ್ಘವಾದ ಪೂಜಾವಿಧಿಗಳು ಕಾರ್ತಿಕ ಮಾಸದ ಹಬ್ಬಗಳು ಹರಿಕಥೆಗಳು, ಪಾಂಡಿತ್ಯ ಪೂರ್ಣ ಪರಮಾರ್ಥಕ ಚರ್ಚೆಗಳು ಕೆಲವು ನರೆಹೊರೆಯವರ ಸರಳವಾದ ಧಾರ್ಮಿಕ ಜೀವನಗಳು ಜೊತೆಗೆ ಜಾತಿಯ ಹೆಮ್ಮೆಯ ಉಸಿರುಗಟ್ಟಿರುವ ವಾತಾವರಣ ನಮ್ಮವರಲ್ಲದ ಬಗ್ಗೆ ನಮಗಿದ್ದ

ತಿರಸ್ಕಾರ ದೃಷ್ಟಿ ಬಡಗೇಣಿದಾರರ ಜೊತೆ ಮಠದವರು ನಡೆಸುತ್ತಿದ್ದ ಕೊನೆಯಿಲ್ಲದ ಕೊರ್ಟು ವ್ಯಾಜ್ಯಗಳು ಈ ಅಂಶಗಳು ಒಬ್ಬ ಲೇಖಕನಾದವನಿಗೆ ಪ್ರಭಾವ ಬೀರುತ್ತವೆ. ಒಬ್ಬ ಲೇಖಕ ಪ್ರಗತಿಪರ ವಾದವನ್ನು ಇಚ್ಛಿಸುತ್ತಾನೆ. ತಾನೇ ಅವರ ಪರ ಹೋರಾಡುತ್ತನೆ. ಹಾಗಾಗಿ ಬ್ರಾಹ್ಮಣರಾದ ಇವರು ಆ ಪರಿಸರದಲ್ಲಿ ಬೆಳೆದರೂ ಅವರ ಪರವಾದ ಅಂಶಗಳು ವ್ಯಕ್ತ ಪಡಿಸದೆ ಆರೋಗ್ಯ ಪೂರ್ಣವಾದ ಚಿಂತನೆಯ ಬರವಣಿಗೆಗೆ ಇವು ಸಹಾಯಕವಾದವು. ಹಾಗೂ ಈ ಲೇಖನದಲ್ಲಿ ಸಾಹಿತ್ಯಕ್ಕೆ ಇವರನ್ನು ಒಲಿಸಿಕೊಳ್ಳುವ ಸಾಮರ್ಥ್ಯವಿದೆ ಎಂಬ ಅಂಶ ಪ್ರಸ್ತಾಪಿಸಸುತ್ತಾರೆ.[11] ಹೇಗೆಂದರೆ ನಿಜವಾದ ಪ್ರಜಾ ತಾಂತ್ರಿಕ ಸಮಾಜದಲ್ಲಿ ಲೇಖಕನ ಪತ್ರ ಇಂತಹದ್ದಾಗಿರುತ್ತದೆ. ಶೀಲವಂತ ಸಮಾಜ , ಪರಂಪರೆಯ ಸ್ಮೃತಿ ಸಾತತ್ಯವನ್ನು ಪ್ರೀತಿಸುವುದರ ಜೊತೆಗೆ ಜನರ ಭಾವುಕತೆಯನ್ನು ದೋಚುವ ಸಮೂಹ ಸನ್ನೀವೇಶಗಳನ್ನು ಆಧರಿಸುವುದಿಲ್ಲ ಲೇಖಕನಿಗೆ ತಾನು ಕೋಮಲವಾದ ಅಂತಃಕರಣದ ಧ್ಯಾನಶೀಲವಾದ ಸಹನಾಗರೀಕನಾಗಿ ಬದಕುತ್ತಾ ಮಾತುಗಳಿಗೆ ಇತರರನ್ನು ಒಲಿಸಿಕೊಳ್ಳುವ ಸಾಮರ್ಥ್ಯವಿದೆ. ಒಂದು ಗತಿಶೀಲವಾದ ನಾಗರಿಕ ಸಮಾಜದ ಸೃಷ್ಟಿಗೆ ತಾವು ಬರೆದಿರುವುದು ಅಂಶ ಕಾಣುತ್ತದೆ. ಏಕೆಂದರೆ ಇಂತಹ ಸಮಾಜದಲ್ಲಿ ಮಾತ್ರ ಸಂಸ್ಕೃತಿಗಳ ಬಹುತ್ವದಲ್ಲಿ ಸಂತೋಷವಿರುತ್ತದೆ. ಅಲ್ಲಿ ಬದಲಾವಣೆಯನ್ನು ಬರವಣಿಗೆಯ ಮೂಲಕ ಹೊರಹಾಕಿದಾಗ ಅದಕ್ಕೊಂದು ಒಲಿಸಿಕೊಳ್ಳುವ ಶಕ್ತಿ ಇದೆ. ಹಾಗಾಗಿ ಸಾಹಿತ್ಯ ಕೇವಲ ಮನೋರಂಜನೆ ಅಲ್ಲ. ಅದು ಸಮಾಜದ ಒಂದು ಪ್ರತಿಬಿಂದು ಸಾಂಸ್ಕೃತಿಕ ಅಂಶಗಳ ಒಟ್ಟು ಮೊತ್ತ. ಹೀಗೆ ಈ ಹಿನ್ನಲೆಯಲ್ಲಿ ತಾವು ಲೇಖನವನ್ನು ತಮ್ಮ ಉದ್ಯೋಗವೆಂದು ಭಾವಿಸಿ ಕಾರ್ಯ ಪ್ರವೃತರಾಗಿರುವುದು ಹೆಮ್ಮೆಯ ಸಂಗತಿ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಪರಂಪರೆ ಹಾಗೂ ಆಧುನಿಕತೆ ಕುರಿತಾದ ಸಂಬಂಧದ ಬಗ್ಗೆ
* ಸಮಾಜದಲ್ಲಿನ ಕ್ರೂರ ಸತ್ಯಗಳನ್ನು ಹೊರಹಾಕಲು
* ಬಾಲ್ಯದಲ್ಲಿಯ ಕೆಲವು ಘಟನೆಗಳು (ಅಸ್ಪೃಶ್ಯ ಹುದುಗಿಕೆರಿ ತೊರೆದು ಹೋಗಿದ್ದು)
* ಪೌರಾಣಿಕ ಮತ್ತು ವಾಸ್ತವಿಕ ಪ್ರಪಂಚದ ಅಂಶಗಳು
* ಗತಿಶೀಲವಾದ ನಾಗರೀಕ ಸಮಾಜದ ಸೃಷ್ಟಿಗೆ ಪೂರಕ

# ನಾನೇಕೆ ಬರೆಯುತ್ತೇನೆ

**ಪಿ. ಲಂಕೇಶ**

ಇಂದಿನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಲಂಕೇಶ್ ಅನನ್ಯ ಹಾಗೂ ಪ್ರಮುಖ ಲೇಖಕರಲ್ಲೊಬ್ಬರಾಗಿದ್ದಾರೆ. ಆರಂಭದಿಂದಲೂ ಭಿನ್ನ ದಾಟಿಯಲ್ಲೇ ಬರೆಯತೊಡಗಿ ನವ್ಯ ಸಾಹಿತ್ಯ ಪಂಥದ ಉತ್ಕರ್ಷ ಸಮಯದಲ್ಲಿದ್ದು ವಿಶಿಷ್ಟ ಸಂವೇದನೆಗಳ ಅಭಿವ್ಯಕ್ತಿಗೆ ತಮ್ಮದೇ ಆದ ಮಾರ್ಗವನ್ನು ಕಂಡುಕೊಂಡವರು. ಕಾವ್ಯ, ಸಣ್ಣಕತೆ, ಕಾದಂಬರಿ, ನಾಟಕ, ವಿಮರ್ಶೆ, ಅನುವಾದ, ಆತ್ಮಚರಿತ್ರೆ ಹೀಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೃಷಿಮಾಡಿ ತಮ್ಮತನದ ವಿಶಿಷ್ಟ ಛಾಪು ಮೆರೆಯುವುದರಲ್ಲಿ ಯಶಸ್ವಿಯಾದವರು.

ಇವರು 'ನಾನೇಕೆ ಬರೆಯುತ್ತೇನೆ' ಎಂಬ ಪ್ರಶ್ನೆ ಮುಂದಿಟ್ಟುಕೊಂಡು ಅರೇಬಿಯನ್ ನೈಟ್ಸ್ ಕಥೆಯ ಮುಖಾಂತರ ಉತ್ತರಕಂಡುಕೊಳ್ಳವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಶಹಜಾದೆ ದೊರೆಗೆ ಸಮ್ಮೋಹಕ ಕುತೂಹಲಕರ ಕತೆ ಹೇಳುತ್ತ ಸಾವಿರದೊಂದು ರಾತ್ರಿಗಳನ್ನು ಗೆದ್ದುಕೊಂಡು, ಆ ಮೂಲಕ ಇಡೀ ಬದುಕನ್ನು ತನ್ನದಾಗಿಸಿಕೊಂಡ ಮಹಾ ಕಲಾವಿದೆ. ಹಾಗೆಯೇ ಬರವಣಿಗೆ ಎನ್ನುವುದು ಬರೆಯುವವನಿಗೆ ಮಾತ್ರವಲ್ಲದೆ ಓದುಗ ವಲಯಕ್ಕೂ ಕುತೂಹಲ ಮೂಡಿಸುವ ಹಾಗೆ ಬರೆಯಬೇಕು ಎನ್ನುವ ಅಂಶ ಅಡಗಿದೆ. ಮತ್ತು ಇವರ ಬದುಕಿನಲ್ಲಿ ದೊರೆತ ಎಲ್ಲ ನೋವು, ಅನುಮಾನಗಳನ್ನು ಮೀರಿ ಅದನ್ನು ಮರೆಯಲು ಬರವಣಿಗೆ ಶುರು ಮಾಡಿದರು ಎನ್ನುತ್ತಾರೆ.[೨] ಬಾಲ್ಯದಲ್ಲಿಯ ಅಪ್ಪ-ಅವ್ವನ ಜಗಳದಿಂದ ಹೊರಬರಲು, ಮತ್ತು ಆ ವೇಳೆಯಲ್ಲಿ ತಾವು ಗಮನಿಸಿದ, ಓದಿದ, ಅನುಭವಿಸಿದ್ದನ್ನು ಮೆಲಕು ಹಾಕಿ ಅದರಿಂದುಂಟಾದ ಅಸಹಾಕತೆ, ಅಪೂರ್ಣತೆ ಬರವಣಿಗೆಗೆ ಹಚ್ಚಿತು. ಎನ್ನುವುದಕ್ಕಿಂತ ಬರೆದು ಆಗಿದ್ದನ್ನೆಲ್ಲಾ ಮೀರಿ ಮರೆತು, ಮರೆಸಲು ಬರೆಯಬೇಕಾಗಿತ್ತು ಎಂಬುದನ್ನು ಕಾಣಿಸುತ್ತಾರೆ. ಹಾಗೆಯೇ ಅನುಭವ ನಾನು ಪ್ರಯತ್ನಿಸದೇ ಬರಬಹುದು. ಬರೆಯುವುದು ಮಾತ್ರ ಅಷ್ಟು ಸಲೀಸಲ್ಲ ಎನ್ನುತ್ತಾರೆ.

ಹಾಗೂ ಇವರನ್ನು ಅಲ್ಲಾಡಿಸಿದ ಮೂರು ಅಂಶಗಳು ಪ್ರೇಮ, ಜೂಜು, ಕದನ ಇವರನ್ನು ವಿವಿಧ ಮಟ್ಟದಲ್ಲಿ ತೊಡಗಿಸಿವೆ. ಈ ಮೂರು Chancy ಆಗಿರುವುದರಿಂದ ಈ ಮೂರರಲ್ಲಿ ಅದೃಷ್ಟ ಮತ್ತು ಸ್ವಂತ ಪ್ರಯತ್ನ ಎರಡೂ ಸೇರಿರುವುದರಿಂದ ಇವರನ್ನು ಬರವಣಿಗೆಗೆ ಹಚ್ಚಿದೆ. ಅದೇ ರೀತಿ ಅನುಭವ ಲೇಖಕನೊಬ್ಬನಿಗೆ ಬರುವ ರೀತಿ ಲೇಖನಲ್ಲದವನಿಗೆ ಬರುವ ರೀತಿ ಬೇರೆ ಬೇರೆಯಾಗಿರುತ್ತದೆ. ಲೇಖಕನಾದವನು ಅನುಭವಿಸುತ್ತಲೇ ತನ್ನ ಅನುಭವ ನೋಡಿಕೊಳ್ಳುತ್ತಾನೆ. ಆ ಬಗ್ಗೆ ಸ್ವಾರ್ಥಿಯಾಗಿರುತ್ತಾನೆ. ಆದ್ದರಿಂದಲೇ ಲೇಖಕ ತನ್ನನ್ನು ತಾನು ಸಂಪೂರ್ಣ ಕೊಟ್ಟುಕೊಳ್ಳಲಾಗದೆ ಅಪೂರ್ಣ ಜೀವಿಯಾಗುತ್ತಾನೆ. ಹಾಗೂ ತನ್ನನ್ನು ತಾನು ಕೊಟ್ಟುಕೊಳ್ಳಲು ಯತ್ನಿಸಿರುವ ಅಂಶ ಗೋಚರಿಸುತ್ತದೆ.

ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು

- ಅರೇಬಿನ್ ನೈಟ್ಸ್ ಕಥೆಯ ಮುಖಾಂತರ ಉತ್ತರ ಕಂಡುಕೊಳ್ಳುವ ಪ್ರಯತ್ನ
- ಬದುಕಿನಲ್ಲಿ ದೊರೆತ ಎಲ್ಲ ನೋವು ಅನುಮಾನಗಳನ್ನು ಮೀರಿ ಬರೆಯುವುದು
- ಅಪ್ಪ-ಅವ್ವನ ಜಗಳದಿಂದ ಹೊರಬರಲು
- ಅಸಹಾಯಕತೆ, ಅಪೂರ್ಣತೆಯು ಇವರನ್ನು ಬರೆಯಲು ಪ್ರೇರೆಪಿಸಿರುವುದು
- ಪ್ರೇಮ, ಜೂಜು, ಕದನ ಗಾಢವಾಗಿ ಪ್ರಭಾವಿಸಿವೆ
- ತನ್ನನ್ನು ತಾನು ಕಂಡುಕೊಳ್ಳಲು

# ನಾನೇಕೆ ಬರೆಯುತ್ತೇನೆ?

**ಕೆ.ಎಸ್. ನಿಸಾರ್ ಅಹಮದ್**

ನವೋದಯ, ನವ್ಯ ಎರಡೂ ಸಾಹಿತ್ಯ ಮಾರ್ಗಗಳಲ್ಲಿ ಕಾವ್ಯ ರಚಿಸುತ್ತಾ ಯಾವ ಪಂಥದ ಹಣೆಪಟ್ಟಿಯನ್ನು ಅಂಟಿಕೊಳ್ಳದೇ ಎಲ್ಲ ಉತ್ತಮ ಅಂಶಗಳನ್ನು ಮೈಗೂಡಿಸಿಕೊಂಡು ಕವಿಯಾಗಿ, ವಿಮರ್ಶಕರಾಗಿ, ಅನುವಾದಕರಾಗಿ, ಸಂಪಾದಕರಾಗಿ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಅಪಾರ. ಅವರು ರಚಿಸಿರುವ ಕಾವ್ಯಗಳು ಇಂದಿಗೂ ಜನರ ಮನಸ್ಸಿನಲ್ಲಿ ಅಚ್ಚಳಿಯ ಉಳಿದಿದೆ.

ಸಾಹಿತ್ಯ ರಚನೆಯನ್ನು ತೊಡಗುವಾಗಲೆಲ್ಲಾ, ತಾನು ಬರೆಯುವ ಕಾರಣಗಳನ್ನು ಮನದಟ್ಟು ಮಾಡಿಕೊಂಡೇ ಲೇಖಕ ಕಾರ್ಯ ಪ್ರವೃತ್ತನಾದಾಗ ತನ್ನ ಜಾಗೃತ ಅರಿವಿಗೆ ಎಟುಕದ ಯಾವುದೋ ರಹಸ್ಯ ತನ್ನ ಲೇಖನ ಕ್ರಿಯೆಯನ್ನು ನಿಯಂತ್ರಿಸುತ್ತದೆ. ಹಾಗಾಗಿ ಜಾಗೃತ ಅರಿವಿಗೆ ಎಟುಕದನ್ನು ಎಚ್ಚರಿಸುವ ಮಟ್ಟಿಗೆ ಬರೆದಾಗ ಲೇಖನಿಗೆ ಶಕ್ತಿ ಬರುತ್ತದೆ. ಅಂದರೆ ಅಲ್ಲಿ ಲೇಖನ, ಆಶಯ ಹಾಗೂ ತಿಳಿವು ಸ್ವಭಾವ ಸಮಾಜದಲ್ಲಿನ ಸ್ಥಾನಮಾನ, ನಂಬಿಕೆ, ಆದರ್ಶಕ ಅಭಿರುಚಿಗಳಿಗೆ ಅನುಗುಣವಾಗಿ ಬರವಣಿಗೆ ನಿಕ್ಷಿಪಗೊಂಡಿರುತ್ತದೆ.

ಇವರಿಗೂ ಸಹ ಇತರ ಸಾಹಿತಿಗಳಂತೆ ಸಾಹಿತ್ಯ ರಚಿಸಲು ಮನಸ್ಸು ಮಾಡಿದ್ದು ಪ್ರೌಢಶಾಲೆಯಲ್ಲಿ ಓದುತ್ತಿರುವಾಗ ಆಗ ಯಾವುದೇ ಘನೋದ್ದೇಶವಿರಲಿಲ್ಲ. ಕಾಲಕಳೆದಂತೆ ಗುರಿ, ಉದ್ದೇಶಗಳು ವಿಕಸಿಸುತ್ತಾ, ವಿಸ್ತರಿಸುತ್ತಾ ಹೋಗಿವೆ ಎನ್ನುತ್ತಾರೆ. ಅಂದರೆ ಬಾಲ್ಯದಲ್ಲಿಯ ನೆನಪುಗಳನ್ನು ಹೊರಹಾಕಲು ಬರೆದರು ನಂತರ ಬುದ್ಧಿಮಟ್ಟ ಬೆಳೆದಂತೆ ಸಮಾಜದಲ್ಲಿನ ಅಂಶಗಳು ಅವರಿಗೆ ಅವರ ಬರವಣಿಗೆಯ ಮೂಲಕ ಹಲವು ಕ್ಷೇತ್ರಗಳಲ್ಲಿ ಕೈ ಹಾಕಿ ಬರೆಯುವಂತೆ ಪೋಷಿಸುತ್ತವೆ. ಹಾಗಾಗಿ ಹಾಡುತ್ತ ಹಾಡುತ್ತ ರಾಗ ಎನ್ನುವ ಗಾದೆ ಮಾತಿಗೆ ಬರವಣಿಗೆ ಮೊದಲಿಂತಲೂ ಅವು ವಿಕಸನ ಹೊಂದೆ ವಿಸ್ತಾರಗೊಳ್ಳುವುದು. ಈ ಅಂಶದಿಂದ ತಿಳಿಯಬಹುದು. ಮನಸ್ಸಿನಲ್ಲಿ ತುಂಬಿದ ಭಾರ, ಒತ್ತಡಗಳನ್ನು ಹಗುರಿ ತರಿಸಿಕೊಳ್ಳಬೇಕೆಂಬ ಹಂಬಲ ಮತ್ತು ತಾವು ಬರೆದ ಬರವಣಿಗೆ ಹತ್ತಾರು ಜನರ ಕಣ್ಣಿಗೆ ಬಿದ್ದು ಅವರಿಂದ ಬೆನ್ನು ತಟ್ಟಿಸಿಕೊಳ್ಳಬೇಕೆಂಬ ಅಭಿಲಾಷೆಯಿಂದ ಮೊದಲು ಕಾರ್ಯ ಆರಂಭ ಮಾಡಿದರು. ಇಲ್ಲಿ ಜನರ ಮನ್ನಣೆ ಗಳಿಸುವ ಬಯಕೆ ಮೂಲ ಚಾಲನೆ ಶಕ್ತಿಯಾಗಿರುವುದು ಕಂಡು ಬರುತ್ತದೆ. ಅಲ್ಲದೆ ಮಿಕ್ಕ ಬರವಣಿಗೆಗಾರರಂತೆ ತಾವು ಸಹ ಬರೆದು ಹೊಗಳಿಸಿಕೊಳ್ಳಬೇಕೆ ಎಂಬ ಅಂಶ ಪ್ರೌಢಾವಸ್ಥೆಯಲ್ಲಿ ಮೆಚ್ಚುಗೆ, ಪ್ರಶಂಸೆ ಇವು ಸ್ವಾಭಾವಿಕ. ಹಾಗೆಯೇ ಇವರಿಗೂ ಹೊರತಾಗಿಲ್ಲ. ಈ ನಿಟ್ಟಿನಲ್ಲಿ ನಾವೆಷ್ಟು ನಿರ್ಲಿಪ್ತರೆಂದು ಭಾವಿಸಿಕೊಂಡರು. ನಮ್ಮ ಮನಸ್ಸಿನ ಆಳದಲ್ಲಿ ನೆಲೆಸಿರುವ ಮಮಕಾರ ಸಂತೃಪ್ತಿಗಾಗಿ ಸಹಜೀವಿಗಳ ಮನಸೊಪ್ಪಿಗೆ ಸೂಕ್ತ ಅಂಥ ಅನಿವಾರ್ಯವನ್ನು ಸಾಮಾಜಿಕ ಜೀವನ ಸೃಷ್ಟಿಸಿರುತ್ತದೆ. ಈ ಹಂಬಲಕ್ಕೆ ಮಗುತನ, ಮುದಿತನವೆನ್ನದೆ ಮನುಷ್ಯ ಜೀವಿತದ ಅವನ ಮುಂದಿನ ಕಾರ್ಯಗಳಿಗೆ ಮತ್ತಷ್ಟು ಹುರುಪನ್ನು ಎರೆಯಬಲ್ಲದು.

ಹಾಗೆಯೇ ಯಾವುದೆ ಲೌಕಿಕ, ವ್ಯವಹಾರಿಕ ಚಟುವಟಿಕೆಗಿಂತ ಮಿಗಿಲಾದ ತೃಪ್ತಿ ಆಹ್ಲಾದ ಕೃತಾರ್ಥಭಾವ ಹಾಗೂ ಇವರ ಸಾಹಿತ್ಯ ಸೃಷ್ಟಿ ಆಗಿರುವುದಕ್ಕೆ ಅವರಿಗೆ ಒದಗಿರುವ ಅಪೂರ್ವ ವ್ಯವಸ್ಥೆಯೆ ಕಾರಣ ಎನ್ನಬಹುದು. ಮನುಷ್ಯ ಸಮಾಜ ಜೀವಿ ಎನಿಸಿಕೊಂಡಿರುವ ತನಕ ತನ್ನ ಸುತ್ತ ಉಸಿರಾಡುವ ಸಹ ಮಾನವರಿಂದ ಮೆಚ್ಚುಗೆ ಪ್ರಶಂಸೆಗಳನ್ನು ಪಡೆಯುವ ಅಭಿಪ್ಸೆಯನ್ನು ಹತ್ತಿಕ್ಕಲಾರ. ಅದು ಅಸ್ವಾಭಾವಿಕವೂ ಅಲ್ಲ. ಹಾಗಾಗಿ ಬರಹ ಮುಂದೆ ಸಾಗಿರುವುದು ಕಾಣಬಹುದು. ವೃಕ್ಷ ತನ್ನ ಬುಡದಿಂದ ಕಾಂಡ ಭಾಗದ ಕಡೆ ಕೊಂಚದೂರ ನೆರವಾಗಿ ಬೆಳೆದು ಆ ಮೇಲೆ ನಾಲ್ಕುದೆಸೆಗಳಲ್ಲಿ ಕಲವರಿಸಿ ಹಬ್ಬುವಂತೆ ಬರಹಗಾರನ ಜೀವಿತದ ದಿನಗಳ ಸರಳ ಮುಗ್ಧ ಆಶ್ರಯ ಮುನುಷ್ಯ ಮುನ್ನಡೆದಂತೆ ಹಲವಾರು ಸನ್ನವೇಶ, ಘಟನೆಗಳು, ತೊರೆಗಳು ಕೂಡಿಕೊಂಡು ಜೀವನವಾಹಿನಿ ಸಂಕೀರ್ಣಗೊಳ್ಳುವಂತೆ ಬರವಣಿಗೆಯೂ ಸಹ ಆ ದಾರಿಯತ್ತ ಹಿಡಿಯುತ್ತದೆ. ಹಾಗೂ ಲೇಖಕನ ಧ್ಯೇಯೊದ್ದೇಶಗಳ ಹಲವು ಮಗ್ಗಲನ್ನು ಪಡೆಯುತ್ತೇವೆ. ಯಾವ ರೀತಿಯೆಂದರೆ ಜೀವನದ ಏರುಪೇರುಗಳು ಕಾಲಾನುಸರಿ ಯಾವ ಸಾಮಾಜಿಕ ಸ್ಥಿತ್ಯಾಂತರ ಅದೇ ರೀತಿ ಸಾಹಿತ್ಯ ಸಂಪರ್ಕದ ದೆಸೆಯಿಂದ ಸಮಾಜ ಸುಧಾರಣೆ ಬದುಕಿನ ಸ್ಥಿತಿಗತಿಗಳ ಮಾರ್ಪಾಟು ಸಾಹಿತಿಯಿಂದ ಆಗಬಲ್ಲದೆಂಬ ಭಾವನೆ ಇವರಲ್ಲಿ ಬೇರೂರಿದ್ದ ಅಂಶ ಓದಿನ ಪತ್ರಿಕೆ ಹಾಗೂ ಭಾಷಣಗಳಲ್ಲಿ ಹಿರಿಯ ಸಾಹಿತಿಗಳು ಪ್ರಸ್ತಾಪಿಸುತ್ತಿದ್ದ ಅಭಿಪ್ರಾಯಗಳ ಅವಿಚಾರಿತ ಅಂಗೀಕಾರದ ಫಲ.

ಈ ಮೇಲಿನ ವಿಚಾರಗಳಿಂದ ಒಂದು ಸಂಗತಿ ರುಜುವಾತು ಆಗುತ್ತದೆ. ಸಾಹಿತ್ಯ ರಚನೆ ಮೂಲಕ ಸಮಾಜದ ಸಾಮಾನ್ಯ ಜನತೆಯ ಮಾತಿರಲಿ, ಧೀಮಂತ ವರ್ಗವನ್ನು ಸಹ ಕ್ರಾಂತಿವೀರರನ್ನಾಗಿ ಪರಿವರ್ತಿಸುವ ಆದರ್ಶ ಭೋಳೆ ಮನಸ್ಸಿಗೆ ಮಾತ್ರ ಹೊಳದಿತು. ಸಾವಕಾಶವಾದ ಪರೋಕ್ಷ ಸಮುದಾಯ ಪರಿವರ್ತನೆಗೆ, ಸಾಹಿತ್ಯ ಅಪರೂಪಕ್ಕೆ ಸಹಕಾರಿಯಾಗಿರಬಹುದು. ಮತ್ತು ಪರಿಸರದ ಭಿನ್ನತೆಯ ಪ್ರಭಾವ ಅಂಶಗಳು ಬರವಣಿಗೆಗೆ ಪ್ರೇರಣೆ ನೀಡಿದ ಅಂಶಗಳು ಕಾಣಬಹುದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಪ್ರೌಢಶಾಲೆಯಲ್ಲಿನ ಬಾಲ್ಯದ ಅನುಭವ
* ಮನಸ್ಸಿನಲ್ಲಿ ತುಂಇದ ಭಾರ, ಒತ್ತಡಗಳನ್ನು ಹಗುರ ಮಾಡಿಕೊಳ್ಳಲು
* ಅಪೂರ್ವ ಭಾವವಸ್ಥೆಯೇ
* ಪರಿಸರದ ಭಿನ್ನತೆಯ ಪ್ರಭಾವ
* ಜನಮನ್ನಣೆ ಗಳಿಸುವ ಬಯಕೆ

# ನನ್ನ ಬರವಣಿಗೆ

ಡಾ. ಚಂದ್ರಶೇಖರ ಕಂಬಾರ

ರಾಷ್ಟ್ರ ಮಟ್ಟದಲ್ಲಿ ಕನ್ನಡ ಸಿದ್ಧಿಸಾಧನೆಗಳನ್ನು ಎತ್ತಿ ಹಿಡಿದಿರುವ ಹಾಗೂ ಅದರ ಪ್ರತೀಕವಾಗಿರುವ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ. ಕಾವ್ಯ, ನಾಟಕ, ಕಾದಂಬರಿ, ಜನಪದ ಕ್ಷೇತ್ರಗಳಲ್ಲಿ ಮಹತ್ವದ ಕೃತಿಗಳನ್ನು ಕಾಣಿಕೆಯಾಗುತ್ತಿರುವುದು ಮಾತ್ರವಲ್ಲದೆ ತಮ್ಮ ಅಂಕೆಯ ಈ ಎಲ್ಲ ಕ್ಷೇತ್ರಗಳಿಗೆ ಹೊಸ ಆಯಾಮವನ್ನು ಜೋಡಿಸುವ ಹಿರಿಮೆಯು ಇವರದಾಗಿದೆ.

ಇವರು ಕವಿಯಾಗಿ, ನಾಟಕಕಾರರಾಗಿ, ಕಾದಂಬರಿಕಾರರಾಗಿ, ವಿದ್ವಾಂಸರಾಗಿ, ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳಾಗಿ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆ ಅವಿಸ್ಮರಣೀಯ.

ಇವರು ಯಾಕೆ ಬರೆಯುತ್ತೇನೆ ಎಂಬ ಪ್ರಶ್ನೆಗೆ ಪ್ರಮುಖವಾಗಿ ತಮ್ಮಲ್ಲಿಯ ಅನಿಸಿಕೆಗಳನ್ನು, ಅನುಭವಗಳನ್ನು ಹೊರಹಾಕಲು ಶಬ್ದಗಳನ್ನು ಮಾಧ್ಯಮವಾಗಿ ಬಳಸಿಕೊಂಡು ಕಥೆಗಳ ಮೂಲಕ, ಚಿತ್ರಗಳ ಮೂಲಕ ಅವುಗಳನ್ನು ಸೆರೆಹಿಡಿದಿರುವುದು ಎನ್ನುತ್ತಾರೆ. ಅಂದರೆ ಇವರು ಬೆಳೆದುಬಂದ ಪರಿಸರದಲ್ಲಿಯ ಅನುಭವಗಳನ್ನು ಒಂದು ವಸ್ತುವನ್ನಾಗಿಸಿ ಬರೆಯುವುದು ಒಬ್ಬ ಕವಿಯ ಲಕ್ಷಣವಾಗಿರುವಂತೆ ಇವರು ಸಹ ಇದಕ್ಕೆ ಹೊರತಾಗಿಲ್ಲ. ಹಾಗಾಗಿ ಅಸ್ತಿತ್ವದಲ್ಲಿರುವ ವಸ್ತುವೊಂದರ ಜೊತೆಗೆ ಕಾವ್ಯಾತ್ಮಕ ಸಂಬಂಧ ಕಂಡುಕೊಳ್ಳಲು ಪ್ರಯತ್ನಿಸಿರುವುದು ಕಾಣಬಹುದು. ಇವರು ನನ್ನ ನೆಲದ ಕವಿಯಾಗಬೇಕೆಂದರೆ "ಮಿಥಿಕಲ್ ಆಗುವುದು ಅನಿವಾರ್ಯವೆನ್ನುತ್ತಾರೆ. ಇಲ್ಲಿ ಮಿಥಿಕಲ್ ಎಂದರೆ ಪುರಾಣಗಳು, ಆಚಾರಗಳು, ವಿಚಾರಗಳು, ಧಾರ್ಮಿಕ ನಂಬಿಕೆಗಳು ಇವುಗಳೊಟ್ಟಿಗಿನ ಬದುಕುವ ಜನರಲ್ಲಿ ಮೈಗೂಡಿಸಿಕೊಂಡಿದ್ದರಿಂದ, ಇವರು ಸಹ ಅವರೊಂದಿಗೆ ಬೆರೆತು (ಮಿಥಿಕಲ್) ಬರೆದಾಗ ಅದರಿಂದ ಜನಸಾಮಾನ್ಯರಿಗೂ ಅರ್ಥವಾಗುತ್ತದೆ ಎಂಬ ನಂಬಿಕೆಯೊಂದಿಗೆ ಈ ಬರವಣಿಗೆ ಸಾಗಿರುವುದು ಕಾಣಬಹುದು. ಈ ಹಿನ್ನೆಲೆಯಲ್ಲಿ ಮಿಥಿಕಲ್ ಆಗುವುದು ಅನಿವಾರ್ಯವೆನ್ನುತ್ತಾರೆ. ಇವರ ಒಂದು ಬರವಣಿಗೆಗೆ ನವ್ಯದ ಸ್ಫೂರ್ತಿ ಎನ್ನುತ್ತಾರೆ. ಹೇಗೆಂದರೆ, ನವ್ಯಸಾಹಿತ್ಯವನ್ನು ಕನ್ನಡದಲ್ಲಿ ಬರೆದವರು ಮುಕ್ಕಾಲು ಪಾಲು ಇಂಗ್ಲೀಷ್ ಸಾಹಿತ್ಯವನ್ನು ಚೆನ್ನಾಗಿ ಓದಿಕೊಂಡವರು." ಇವರು ಇಂಗ್ಲೀಷಿನ ಪಾರಿಭಾಷಿಕ ಶಬ್ದಗಳನ್ನು ಅರ್ಥವಾಗದ ರೀತಿಯಲ್ಲಿ ತಂದು ಬಳಸಿದ್ದರಿಂದ ತಾವು ಹಳ್ಳಿ ಸೊಗಡಿನ ಭಾಷೆಯಲ್ಲಿ ಬರೆದು ಎಲ್ಲರಿಗೂ ಅರ್ಥವಾಗುವ ನಿಟ್ಟಿನಲ್ಲಿ ಚಿರಪರಿಚಿತರಾದರು ಹಾಗಾಗಿ ಜನಪದ ಕ್ಷೇತ್ರದಲ್ಲಿ ವಿಶಿಷ್ಟ ಛಾಪನ್ನು ಮೂಡಿಸಿದ್ದಾರೆ.

ಬರಹಗಾರನೊಬ್ಬನಿಗೆ ಯಾವತ್ತೂ ಅವನ ಕಾಲದ ಪ್ರಜ್ಞೆ ಮತ್ತು ಅವನ ದೇಶದ ಪ್ರಜ್ಞೆಯಿರುವಂತೆ ಕಂಬಾರರಿಗೂ ಟೆಕ್ಸ್‌ಚರ್ ಅನ್ನು ಪಡೆದುಕೊಳ್ಳುವುದು ಮುಖ್ಯವಾಗಿ ದೇಶ ಪ್ರಜ್ಞೆಯ ಮುಖಾಂತರವೇ ಆಗಿವೆ. ಇಲ್ಲಿ ಓದಿನ ಮೂಲಕ ಆ ಪ್ರಜ್ಞೆ ಪಡೆಯುವುದರ ಜೊತೆಗೆ ವೈಯಕ್ತಿಕ ಅನುಭವದ ಸಾಪೇಕ್ಷ ಒತ್ತಡಗಳು ಹಾಗೂ ಸಮಕಾಲೀನ ಕನ್ನಡ ಲೇಖಕರ ಮಧ್ಯೆ ತಮ್ಮ ವ್ಯಕ್ತಿ ವಿಶಿಷ್ಟತೆಯನ್ನು ಕಟ್ಟಿಕೊಳ್ಳುವುದಕ್ಕಾಗಿ ಪರಿಸರದ ಅನುಭವದ ಮೂಲಕ ಬರವಣಿಗೆಯನ್ನು ಹೊರಹಾಕುವಂತಹದ್ದು ಕಾಣಬಹುದು.

ಸಂಸ್ಕೃತ ಮೇಲ್‌ಜಾತಿಗೆ ಸೀಮಿತವಾಗಿದ್ದು ಅಂದಿನಕಾಲದಲ್ಲಿ ಇವರು ಮೇಲ್‌ಜಾತಿಗೆ ಅಂದರೆ ಸಂಸ್ಕೃತ ಪ್ರಭಾವದ ಜಾತಿಗೆ ಸೇರದೆ. ಕಾಲ, ರೂಪ, ಜನ್ಮ ಮೋಕ್ಷ, ಮಡಿ ಮೈಲಿಗೆ ಎನ್ನದೆ, ವೈಭವ ಸಮೃದ್ಧ ಪ್ರಜ್ಞೆ ಎಲ್ಲರೊಡನೆ ಬೆರೆತು, ತಿಳಿದು ಅದಕ್ಕೆ ಹತ್ತಿರವಾಗಿ, ಅನಕ್ಷರಸ್ಥರಾದ ಶೋಷಿತರಾದ ಜನರ ಜೀವನ ಸಮೃದ್ಧ. ಹಾಡುಗಳ ಮೂಲಕ ತಮ್ಮ ಅನುಭವವನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದರು ಹಾಗಾಗಿ ಪ್ರಸ್ತುತ ಈ ಲೇಖನ ನವ್ಯದ ಪ್ರಭಾವ ಮಿಥಿಕಲ್ ದೇಶಪ್ರಜ್ಞೆ, ಸಾಮಾಜಿಕ ಅಂಶ ಇವುಗಳ ಕುರಿತ ಅಂಶ ಚರ್ಚಿಸುತ್ತದೆ.

**ಈ ಲೇಖನದಲ್ಲಿ ಕಂಡುಬರುವ ಮುಖ್ಯ ಅಂಶಗಳು**

* ಅನಿಸಿಕೆಗಳನ್ನು, ಅನುಭವಗಳನ್ನು ಹೊರಹಾಕಲು
* ಅಸ್ತಿತ್ವದಲ್ಲಿರುವ ವಸ್ತುವೊಂದರ ಜೊತೆಗೆ ಕಾವ್ಯಾತ್ಮಕ ಸಂಬಂಧ ಕಂಡುಕೊಳ್ಳಲು
* ನವ್ಯದ ಪ್ರಭಾವ
* ವ್ಯಕ್ತಿ ವಿಶಿಷ್ಟತೆಯನ್ನು ಕಟ್ಟಿಕೊಳ್ಳಲು
* ಸಾಮಾಜಿಕ ಅಂಶಗಳ ಜೊತೆಗೆ ಮಿಥಿಕಲ್

# ಅಡಿ ಟಿಪ್ಪಣಿಗಳು

೧. ಡಾ. ಅಮರೇಶ ನುಗಡೋಣಿ ನಾನೇಕೆ ಬರೆಯುತ್ತೇನೆ, ಪುಟ-೬೨

೨ ಅದೇ, ಪುಟ-೬೩

೩. ಅದೇ, ಪುಟ-೬೫

೪. ಜಿ.ಎಸ್. ಸಿದ್ಧಲಿಂಗಯ್ಯ (ಸಂ) ಸಾಲು ದೀಪಗಳು, ಪುಟ-೭೩

೫. ಡಾ. ಅಮರೇಶ ನುಗಡೋಣಿ, ನಾನೇಕೆ ಬರೆಯುತ್ತನೆ, ಪುಟ-೬೬

೬. ಚಿ.ಸಿ. ಲಿಂಗಣ್ಣ (ಸಂ) ಸಾಹಿತ್ಯ ಸಂಸ್ಕೃತಿ ಕೋಶ, ಪುಟ-೭೩

೭. ಜಿ.ಎಸ್. ರಮೇಶ, ಪ್ರಸಿದ್ಧಕವಿಗಳ ಪರಿಚಯ, ಪುಟ-೧೩

೮. ಡಾ. ಅಮರೇಶ ನುಗಡೋಣಿ (ಸಂ) ನಾನೇಕೆ ಬರೆಯುತ್ತೇನೆ, ಪುಟ-೬೮

೯. ಅದೇ, ಪುಟ-೬೯

೧೦. ಅದೇ, ಪುಟ-೭೦

೧೧. ಅದೇ ಪುಟ-೭೧

೧೨. ಅದೇ ಪುಟ-೭೨

೩

೧. ಶಂಭಾ ಜೋಷಿ

೨. ಎಂ.ಎಂ. ಕಲಬುರ್ಗಿ

ಇವರನ್ನು ಮಾತ್ರ ಪ್ರತ್ಯೇಕವಾಗಿ ಅಧ್ಯಯನಕ್ಕೆ ಆಯ್ಕೆ ಮಾಡಲಾಗಿದೆ. ಕಾರಣ ಇವರು ಕನ್ನಡದ ಬಹುದೊಡ್ಡ ಸಂಶೋಧಕರಾಗಿದ್ದಾರೆ. ಇವರಿಬ್ಬರ ಆಲೋಚನೆಗಳಲ್ಲಿ ಮತ್ತು ಚಿಂತನೆಯಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಆದರೆ ತಮ್ಮ ತಮ್ಮ ಸಂಶೋಧನೆಯ ವೈಧಾನಿಕತೆಯಲ್ಲಿ ಕನ್ನಡ ಸಂಸ್ಕೃತಿ ಬಗ್ಗೆ ಅವರದೇ ಆದ ತಾತ್ವಿಕ ನಿಲುವುಗಳ ಮೂಲಕ ನಾಡು, ನುಡಿ, ಸಮಾಜ, ಸಂಸ್ಕೃತಿಯ ಬಗ್ಗೆ ಆಲೋಚಿಸಿದ್ದಾರೆ. ಅವರು ಸಂಶೋಧನೆಯ ನಿಲುಗಳನ್ನು ತಮ್ಮ 'ನಾನೇಕೆ ಬರೆಯುತ್ತೇನೆ' ಲೇಖನಗಳಲ್ಲಿ ವ್ಯಕ್ತ ಪಡಿಸಿದ್ದಾರೆ. ಅವುಗಳ ಅಧ್ಯಯನವನ್ನು ಇಲ್ಲಿ ವಿವರವಾಗಿ ಕೈಗೊಳ್ಳಲಾಗಿದೆ.

# ಎರಡಿಲ್ಲದ ಬಾಳೆ ಪೂರ್ಣ "ಕೃತಿ"

**ಶಂಬಾ ಜೋಷಿ**

ಶಂಕರರಾವ್ ಬಾಳದೀಕ್ಷಿತ ಜೋಷಿಯವರು ಕ್ಲಿಷ್ಟ ಶೈಲಿಯ ಸಂಶೋಧಕರು. ಅವರ ಆಲೋಚನಾ ವಿಧಾನ, ವೈಚಾರಿಕ ನಿಲುವು ಸಂಕೀರ್ಣ ಸ್ವರೂಪದ್ದು. ನಮ್ಮ ಪ್ರಾಚೀನ ಪರಂಪರೆಯ ಹುಡುಕಾಟ ಅವರ ಬರವಣಿಗೆಯ ಪ್ರಧಾನ ಹೂರಣ. ಸನಾತನ ಸಾಂಸ್ಕೃತಿಕ ಅಂಶಗಳನ್ನು ದೇಶೀ ನೆಲೆಯಲ್ಲಿ ಅಭಿವ್ಯಕ್ತಿಸಲು ಪ್ರಯತ್ನಿಸುವುದು ಅವರ ರೀತಿ. ತಮ್ಮ ಸಂಶೋಧನಾ ವಲಯಕ್ಕೆ ಜನಪದ ಸಂಸ್ಕೃತಿಯ ವಿದ್ಯಮಾನಗಳನ್ನು ದುಡಿಸಿಕೊಂಡಿರುವುದು ವಿಶೇಷ ಸಂಸ್ಕೃತಿ ಮೀಮಾಂಸೆಯಲ್ಲಿ ಶಿಷ್ಟ ಪದದಂತೆ ಜನಪದವನ್ನೂ ಏಕ ಪ್ರಕಾರವಾಗಿ ಬೆಳೆಸಿಕೊಳ್ಳುವುದು ಅವರ ಜಾಯಮಾನ.

ಇಂದು ಗೋದಾವರಿಯ ನೆರೆಯಲ್ಲಿರುವ ಮಹಾರಾಷ್ಟ್ರದಲ್ಲಿ ಶಂಬಾ ಅವರು ಕಳೆದು ಹೋದ ಕರ್ನಾಟಕವನ್ನು ಹುಡುಕಿದ್ದು ಸಂಯುಕ್ತವಾಗಿದೆ. ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕಗಳ ನಡುವಿನ ಸಾಂಸ್ಕೃತಿಕ ಬಾಂಧವ್ಯ ಎರಡು ಭಿನ್ನ ಭಾಷೆಗಳ ಕಾರಣದಿಂದಾಗಿ ಬಿಟ್ಟು ಹೋಗುವಂಥದ್ದಲ್ಲ. ಮರಾಠಿಯ ಮೇಲೆ ಹಳೆಗನ್ನಡದ ಗಾಢವಾದ ಪ್ರಭಾವವಿದೆ. ಮಹಾರಾಷ್ಟ ಪ್ರದೇಶವನ್ನು ಒಂದು ಕಾಲಕ್ಕೆ ಕನ್ನಡ ರಾಜರು ಆಳಿದ ಕುರುಹುಗಳು ಉಳಿದುಕೊಂಡಿವೆ. ಸ್ಥಳನಾಮಗಳಲ್ಲಿ ಎಷ್ಟೋ ಕನ್ನಡದ ಹೆಸರುಗಳಿವೆ. ಜ್ಞಾನೇಶ್ವರನ ಕಾವ್ಯದಲ್ಲಿ ಕನ್ನಡದ ಅಪಾರವಾದ ಶಬ್ದ ಸಂಗ್ರಹವಿದೆ. ಹಳೆಯ ಮರಾಠಿ ಕವಿಗಳು ಕನ್ನಡ ಕವಿಗಳನ್ನು ನೆನೆಸಿಕೊಂಡಿದ್ದಾರೆ. ಕನ್ನಡ ಕವಿಗಳು ಕೂಡ ಮರಾಠಿಯಲ್ಲಿ ಕೃತಿ ರಚನೆ ಮಾಡಿದ್ದಾರೆ. ಶಂಭಾ ಜೋಷಿಯವರು ಈ ಎಲ್ಲ ಪುರಾವೆಗಳನ್ನು ಒಟ್ಟುಗೂಡಿಸಿ ತಮ್ಮ ಸಿದ್ಧಾಂತವನ್ನು ಮಂಡಿಸಿದ್ದಾರೆ. ಈ ಶಾಸ್ತ್ರಬದ್ಧವಾದ ಮೆರವಣಿಗೆಯಲ್ಲಿ ತಪ್ಪುಗಳಿರಬಹುದು ಆದರೆ ಅದಕ್ಕೆಂದು ಶಾಸ್ತ್ರ ಸುಳ್ಳಾಗುವುದಿಲ್ಲ. ಮಹಾರಾಷ್ಟ್ರ ಮತ್ತು ಕರ್ನಾಟಕಗಳ ನಡುವಿನ ಸಾಂಸ್ಕೃತಿಕ ವಿನಿಮಯವನ್ನು ವಸ್ತುವನ್ನಾಗಿಟ್ಟುಕೊಂಡು ಶಂಭಾ ಜೋಷಿಯವರು ಕರ್ನಾಟಕದ ಭೌಗೋಳಿಕ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಮೇರೆಗಳನ್ನು ಸ್ಥಿರವಾಗಿಸಿದ್ದಾರೆ.

ನಾನೇಕೆ ಬರೆಯುತ್ತೇನೆ ಎಂಬ ಪ್ರಶ್ನೆ ಶಂಬಾ ಜೋಷಿ ಅವರು ತಮ್ಮಲ್ಲಿ ಕೇಳಿಕೊಂಡಾಗ, ಅವರು ಸಹಜವಾಗಿ ಮುಖ್ಯಉದ್ದೇಶ ನನ್ನದೊಂದು ಸಿದ್ಧಾಂತ ಸ್ಥಾಪನೆಯಲ್ಲ ಕೇವಲ ಸತ್ಯ ಸಂಶೋಧನೆ, ಸಂಶೋಧಕನೆಂದು ನಾನಿದನ್ನು ಕೈಗೊಂಡವನಲ್ಲ. ಏಕೆಂದರೆ ನನಗೆ ಆ ಅಧಿಕಾರವಿಲ್ಲ. ಅಲ್ಲದೇ ಇತಿಹಾಸ ಸಂಶೋಧನವು ನನ್ನ ಕ್ಷೇತ್ರವೂ ಅಲ್ಲ ಎಂದು ತಾವೇ ಹೇಳಿಕೊಳ್ಳತ್ತಾರೆ. ಅಂದರೆ ವಾದ-ಪ್ರತಿವಾದ ಮಾಡುವುದಲ್ಲ. ಸತ್ಯವನ್ನು ಹೇಳುವುದು, ಹುಡುಕುವುದು 'ಎರಡಿಲ್ಲದ ಬಾಳೆ ಪೂರ್ಣ' "ಕೃತಿ"[1] ಅಂದರೆ, ಕೃತಿ ಬೇರೆಯಲ್ಲ ತಾವು

ಬೇರೆಯಲ್ಲ. ಎರಡು ಒಂದೇ. ಬರವಣಿಗೆ ಹೇಗೆಯೋ? ಹಾಗೆಯೇ ವ್ಯಕ್ತಿತ್ವ ಎಂಬ ಅರ್ಥ ಸೂಚಿಸುತ್ತದೆ. ಹಾಗೆಯೇ ಮುಂದುವರಿದು ನಾಡಿಗಾಗಿ ಏನಾದರೂ ಮಾಡಬೇಕು ನಿಜವರಿತು ಬಾಳಬೇಕು. ಎಂಬುದೇ ನನ್ನ ಜೀವನದ ಮೂಲ ಸಂಕಲ್ಪ ಎಂಬ ಕಾವ್ಯವನ್ನು ಗಮನಿಸಿದಾಗ ಇವರ ಬರವಣಿಗೆ ಎಷ್ಟು ಅರ್ಥವಂತಿಕೆಯನ್ನು ಪಡೆಯುತ್ತದೆ. ಅಲ್ಲವೇ ಇವರು ಸ್ವಕಾರ್ಯಕ್ಕೆ ಬರವಣಿಗೆ ಅಲ್ಲ ನಾಡಿಗಾಗಿ ಅದು ಸುಳ್ಳು ಬರವಣಿಗೆಯಲ್ಲ ನಿಜವನ್ನರಿತು ಬಾಳಬೇಕು ಆ ನಿಟ್ಟಿನಲ್ಲಿ ಬರವಣಿಗೆ ಬರೆಯಬೇಕು ಎಂದು ಅಪೇಕ್ಷಿಸುತ್ತಿದ್ದರು.

ಇವರು ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು ಅನಾಥ ದೈನ್ಯಾವಸ್ಥೆಯ ಭವಣೆಗಳನ್ನೆಲ್ಲ ಅನುಭವಿಸುತ್ತಾ ಅಲೆಯುವುದರಲ್ಲಿಯೇ ೧೫ ವರ್ಷ ಕಳೆದರು ಇದನ್ನು ಗಮನಿಸಿದಾಗ ಬಾಲ್ಯದ ಪೂರ್ವ ವಯಸ್ಸಿನ ಭಾವನೆಗಳಲ್ಲಿ ಕಮರಿ ಯಾತನೆ ಅನುಭವಿಸಿದ್ದಾರೆ. ಈ ಲೇಖನದಲ್ಲಿ ತಮ್ಮ ಪ್ರಾಥಮಿಕ ಶಾಲೆಯ ೨ನೆಯ ಇಯತ್ತಿನಲ್ಲಿ "ಅಯ್ಯನವರು" ಶಿಕ್ಷಕರಾಗಿದ್ದರು ಇವರು ತಮ್ಮನ್ನು ಬುದ್ಧಿವಂತ ಹುಡುಗರಲ್ಲಿ ಎಣಿಸುತ್ತಿದ್ದಂತೆ ಎಂದು ಹೇಳುತ್ತಾರೆ. ಈ ಅಂಶವು ಇವರಿಗೆ ಆತ್ಮ ವಿಶ್ವಾಸವು ಅಂಕುರಿಸಿ ತಮ್ಮ ಜೀವನಕ್ಕೆ ಮೊದಲ ನವಜೀವನವೆನ್ನೆರದ ಅವರನ್ನು ತಮ್ಮ ಅಂತರಾಳದಲ್ಲಿ ಈಗಲೂ ಆದರದಿಂದ ನಮಸ್ಕರಿಸುತ್ತಿರುತ್ತೇನೆ ಎನ್ನುತ್ತಾರೆ. ಅಂದಾಗ ಬಾಲ್ಯದ ಪ್ರಾಥಮಿಕ ಶಿಕ್ಷಕರು ಇವರಿಗೆ ಬೆನ್ನುಲುಬಾಗಿ ನಿಂತು ಮುಂದೆ ಅಭ್ಯಾಸ ಮಾಡಲು ಪ್ರೋತ್ಸಾಹಿಸಿರುವುದು ಕಂಡುಬರುತ್ತದೆ. ಹೀಗೆ ಮೂರು ವರುಷ ಬುದ್ಧಿ ನೂರು ವರ್ಷ ಅನ್ನುವ ಹಾಗೆ ಬಾಲ್ಯದ ಬುನಾದಿ ಇವರಿಗೆ ಸಹಕಾರಿಯಾಗಿ ಬರವಣಿಗೆಗೆ ಸಂಶೋಧನೆಗೆ ಧುಮಿಕಿರುವುದು ಕಾಣಬಹುದು.

೧೯೩೦ರ ಅಸಹಕಾರ ಆಂದೋಲನದ ಸಂದರ್ಭದಲ್ಲಿ ಇವರನ್ನು ಹೋರಾಟದ ಮನೋಭಾವ ಬೆಳೆಸಿ ನಾಡು ನುಡಿ ಕುರಿತಾದ ಚಿಂತನೆ ಮಾಡುವ ಹಾಗೆ ಇವರನ್ನು ಹುರಿದುಂಬಿಸಿವೆ. ಹಾಗೂ ಗೆಳೆಯರಾದ ಬುರ್ಲಿಯವರು ನಾಗಪುರ ಕಾಂಗ್ರೆಸ್ಸಿನ ಸಂದೇಶವನ್ನು ಹರಡಲು ತಮ್ಮ ನೌಕರಿಯನ್ನು ತೊರೆದು ಇತರ ತರುಣರಿಗೆಲ್ಲ ಒಗೊಟ್ಟು ಈ ಕ್ರಾಂತಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಹಾಗೆ ಮಾಡಿರುವುದು, ಇವರ ಒಂದು ಸಂಸ್ಕೃತಿ, ನಾಡು ನುಡಿಯ ಬಗೆಗಿನ ಒಂದು ಕಾಳಜಿ ಈ ಲೇಖನದಲ್ಲಿ ಕಂಡುಬರುತ್ತದೆ. ಅದೇ ರೀತಿ ಮಹಾತ್ಮ ಗಾಂಧೀಜಿಯ ಉಪದೇಶದಿಂದ ಸ್ಫೂರ್ತಿಗೊಂಡು[೨] ಸರ್ವೋದಯ, ಸ್ವರಾಜ್ಯದ ಕಲ್ಪನೆ ಹಾಗೂ ಕ್ರಿಯಾಶೀಲ ತತ್ವಗಳು ಇವರನ್ನು ಬರೆಯಲು ಪ್ರೇರೆಪಿಸಿರುವುದು ಕಾಣಬಹುದು. ನಾಡಿನ ಬಂಧ ವಿಮೋಚನೆಗಾಗಿ ದುಡಿದ ದೇಶ ವಿದೇಶದ ಹಲವು ಮಹಾ ವಿಭೂತಿಗಳ ಚರಿತೆಗಳನ್ನು ಓದಿದ್ದ ಇವರು ಲೋಕಮಾನ್ಯ ತಿಲಕರಿಂದ ಪಡೆದ ಸ್ಫೂರ್ತಿ ಹಾಗೂ ಮ್ಯಾಝಿನಿ, ಅರವಿಂದಘೋಷರ, ಚರಿತ್ರೆ ಪುಸ್ತಕ ಮೆಚ್ಚುಗೆಯಾಗಿದ್ದವಂತೆ ಹಾಗಾಗಿ ಶಂಬಾ ಜೋಷಿ ಅವರು ಧಾರವಾಡಕ್ಕೆ ಕಾಲಿಟ್ಟ ಮೇಲೆ ಈ ಮಹಾ ಪುರುಷರ ಚರಿತೆಗಳನ್ನು ಬರೆದು ಪ್ರಕಟಿಸಬೇಕೆಂದು ನಿಶ್ಚಯಮಾಡಿದ್ದರಂತೆ ಹೀಗಾಗಿ ಅವರು ಮೊದಲು

ಈ ಚರಿತೆಯ ಬರವಣಿಗೆಯ ಮೂಲಕ ಬರವಣಿಗೆಗೆ ಧುಮುಕಿದರು ಹಾಗೂ ಬಡತನದ ಬೇಗೆಯಲ್ಲಿ ಬೆಳೆದ ಇವರು ಸಾಕಷ್ಟು ಓದಿಕೊಂಡಿದ್ದರು. ಹಲವಾರು ಪುಸ್ತಕಗಳ ಪರಿಚಯವಿದ್ದರಿಂದ ಅವುಗಳನ್ನು ಪ್ರಕಟಿಸಿದಾಗ ಹಣದ ಮೂಲಕ ಉಪಜೀವನ ಸಾಗಿಸಬಹುದು ಎಂಬ ಅಂಶದಿಂದ ಧಾರವಾಡಕ್ಕೆ ಬಂದರು. ಆದರೆ ಧಾರವಾಡಕ್ಕೆ ಬಂದ ಮೇಲೆ ದೇಶದ ಸ್ವಾತಂತ್ರ್ಯಕ್ಕಾಗಿ ಎಲ್ಲರೂ ಹೋರಾಟದಲ್ಲಿ ಪಾಲ್ಗೊಂಡಿದ್ದರ ಚಿತ್ರಣ ಸ್ವತಃ ಕಣ್ಣಿನಿಂದ ಎಲ್ಲ ಕಾರ್ಯ ತಾವೇ ವೀಕ್ಷಿಸುತ್ತಿದ್ದರಿಂದ ತಾವು ಅದರಲ್ಲಿ ಪಾಲುದಾರನಾಗಿ ಕೃತಾರ್ಥನಾಗಬೇಕೆಂಬ ಅಂಶವನ್ನು ತಮ್ಮ ಮನಸ್ಸಿನಲ್ಲಿ ಹೊಕ್ಕು ಬೇರೆ ವಿಚಾರವೇ ಬರಲಿಲ್ಲ ಅಂದರೆ ತಮ್ಮ ಉಪಜೀವನಕ್ಕಾಗಿ ಪುಸ್ತಕ ಬರೆಯಬೇಕು ಎಂಬ ಅಂಶ ಕಂಡುಬರುತ್ತದೆ. ಸ್ವತಂತ್ರ್ಯಕ್ಕಾಗಿ ಹೋರಾಟದ ಅನುಭವಗಳು ಇವರ ಮನಸ್ಸಿನಲ್ಲಿ ತಿಳಿದಿದ್ದರಿಂದ ದೇಶ ಸೇವೆಗಾಗಿ ದುಡಿದರು. ಆ ಮೂಲಕ ಬರವಣಿಗೆಗ ಧುಮುಕಿದರು. ಯಾವ ರೀತಿ ಎಂದರೆ ಕರ್ನಾಟಕ ವೃತ್ತ ಮತ್ತು ಧನಂಜಯ ವಾರ ಪತ್ರಿಕೆಯಲ್ಲಿ "ಏಳಿರಿ ನಾಡಿಗಾಗಿ ದುಡಿಯಲು ಸಿದ್ಧರಾಗಿರಿ" ಎಂದು ಮಹಾತ್ಮ ಗಾಂಧೀಜಿಯವರು ಕಲಿಸಿದ ಖಾದಿ, ಅಸ್ಪೃಶ್ಯೋದ್ಧಾರ, ಗ್ರಾಮೋದ್ಧಾರ ಇವುಗಳ ಸತ್ವಸಾರ ಲೇಖನಗಳಲ್ಲಿ ಆವೇಶಯುಕ್ತವಾಗಿ ಬರೆಯುವುದು ಗಾಂಧೀಜಿಯವರ ವಿಚಾರಧಾರೆಗಳು ಇವರ ಮನಸ್ಸಿನ ಮೇಲೆ ಬರವಣಿಗೆಗೆ ಪೂರಕವಾಗಿ ಕಾರ್ಯನಿರ್ವಹಿಸಿದೆ. ಅದೇ ರೀತಿ ಶ್ರೀ ಬುರ್ಲಿ ಹಾಗೂ ಶ್ರೀ ಸತ್ಯವಂತರಾವ್ ಮಳೆಬೆನ್ನೂರೆಂಬ ತೀವ್ರ ವಿಚಾರಿ ತರುಣರ ಭೇಟಿಯ ಮೂಲಕ ಇವರ ನಿಲುವಿಗೆ ಸ್ಪಂದಿಸಿ ಶಂಬಾ ಅವರು ಸಾಮಾಜಿಕ ಕ್ರಾಂತಿ ಸ್ತ್ರೀಯರ ಆಚಾರ-ವಿಚಾರಗಳ ಕ್ರಾಂತಿ ಅವರನ್ನು ಮುಂದುವರೆಯಲು ಅವರಿಗೂ ಅವಕಾಶ ಅಭಿವ್ಯಕ್ತಿ ಸ್ವಾತಂತ್ರ್ಯ ಕಲ್ಪಿಸಿಕೊಟ್ಟರು.

ಸದರಿ ಈ ಲೇಖನದಲ್ಲಿ ಪತ್ನಿಯ ನೆರವನ್ನು ಹಾಗೂ ತಿಳುವಳಿಕೆಯ ಸಹಾಯದಿಂದ ತಾವು ಬರೆಯಲು ಸ್ಫೂರ್ತಿ ಎನ್ನುವ ಅಂಶ ಗೋಚರಿಸುತ್ತದೆ. ಹೇಗೆಂದರೆ ತಾವೇ ಹೇಳಿದಂತೆ ಅಭ್ಯಾಸ ವಿಚಾರ ಅನುಭವಗಳ ತಿಳಿ ಬೆಳಕಿನಲ್ಲಿ ರೂಢಿಸಂಪ್ರದಾಯಗಳೊಳಗಿನ ಒಳ್ಳೆಯ ಭಾಗವು ಯಾವುದೋ ಅದನ್ನು ಆಚರಿಸಿ ಯಶಸ್ವಿಯಾಗಿದ್ದಾರೆ ಎನ್ನುತ್ತಾರೆ. ಕರ್ಮವೀರ ವಾರಪತ್ರಿಕೆ "ಇಲ್ಲಿ ಬೆಂಕಿಯು ಆರಿತೆ?" ಮುಂತಾದ ಕೆಲವು ಬಿಡಿ ಬರಹಗಳನ್ನು ತೆಗೆದುಕೊಂಡು ಮುದ್ರಿಸುತ್ತಿದ್ದು ಇವರ ಲೇಖನ ವ್ಯವಸಾಯಕ್ಕೆ ಉತ್ತೇಜನ ಎನ್ನಬಹುದು ಹೊರಜಗತ್ತಿಗೆ ಕಾಣದೇ ಇರುವ ಇವರು ಇಷ್ಟೊಂದು ಪ್ರಕಟಗೊಳ್ಳುತ್ತಿರುವಾಗ ಇವರ ಬರವಣಿಗೆಯಲ್ಲಿ ಶಕ್ತಿ ಇದೆ, ಹೋರಾಟದ ಮನೋಭಾವ ಇದೆ, ಸಾಂಸ್ಕೃತಿಕ ಚಿಂತನೆ ಇದೆ ಎಂಬ ಅಂಶ ಗೋಚರವಾಗುತ್ತದೆ.

ಇವರ ಬುದ್ಧಿಶಕ್ತಿಗೆ ಮೆಚ್ಚಿ ದೇ.ಬ. ದಿವಾಕರರು, ಶ್ರೀ ಬಿ.ಎಸ್. ಕುಡ್ವರು, ರಂಗರಾಯರು, ಶ್ರೀಮಾನ್ ಹುಕ್ಕೇರಿಕರು, ರಾಮರಾಯರು[3] ಶಂಬಾ ಅವರಿಗೆ ಅವಕಾಶಗಳನ್ನು ಕೊಟ್ಟು ಮತ್ತೆ ಅವರನ್ನು ಅಲ್ಲಿಂದ ಬಿಡುಗಡೆಗೊಳಿಸಿದಾಗ ಮತ್ತೆ ಬೇರೆಯಡೆ ಹುಡುಕಾಟದ ಕೆಲಸದಲ್ಲಿ ಒಳ್ಳೆಯ ಒಳ್ಳೆಯ ಲೇಖನಗಳು ಬರೆಯಲು ಸ್ಫೂರ್ತಿದಾಯಕವಾದವು.

ನಾನೊಬ್ಬ ಸಂಸ್ಕೃತಿಯ ಅಭ್ಯಾಸಿ. ಸಂಸ್ಕೃತಿಯ ಉಗಮ ವಿಕಾಸದ ಇತಿಹಾಸವನ್ನು ಕುರಿತುಕೊಂಡು ಅವರ ಬೆಳಕಿನಲ್ಲಿ ನಮ್ಮ ನಾಡಿನ ಇಂದಿನ ಜೀವನ ಬೆಳೆಯಬೇಕೆಂಬ ಹಂಬಲ ನನಗೆ ಅದಕ್ಕಾಗಿ ಅವಶ್ಯಕವಾದ ಅಭ್ಯಾಸ ಆಚಾರಗಳಿಂದ ನನಗೆ ಇಷ್ಟ ಎಂದು ಈ ಲೇಖನದಲ್ಲಿ ಹೇಳುತ್ತಾರೆ. ಹಾಗಾಗಿ ಇವರು ಈ ದೃಷ್ಟಿಕೋನದಿಂದ ಕರ್ಮವೀರದಲ್ಲಿ ಹಲವಾರು ಲೇಖನಗಳು ಬರೆದರು ಅದು ಕನ್ನಡ ನಾಡಿನ ಜನಗಳ ನಡೆ–ನುಡಿಗಳ ಅಭ್ಯಾಸದಲ್ಲಿ ಕಂಡು ಕೆಲವು ಮಾತುಗಳು ವಿಮರ್ಶಿಸಿದ್ದಾರೆ. ಕರ್ನಾಟಕದ ಏಕೀಕರಣದ ಸಂದರ್ಭಗಳು ಸನ್ನಿವೇಶಗಳು ಬರೆದರು. ಇವರು ಅನುಭವಗಳಿಸಲು, ಜ್ಞಾನ ಪಡೆದುಕೊಳ್ಳಲು, ಬಾಳು ತಿಳಿಯಬೇಕೆಂಬ ಅಂಶದಿಂದ ನಾನು ಸಿರಿವಂತ ನವಕೋಟಿ ನಾರಾಯಣನಲ್ಲದಿದ್ದರೂ, ಲಕ್ಷವನ್ನಿಟ್ಟು ಲಕ್ಷಾಧೀಶನು ನಾನು ಗಳಿಸಿದುದನ್ನು ಉಳಿದವರಿಗೂ ಹಂಚಿ ಕೊಡುವುದರಲ್ಲಿಯೇ ನನಗೆ ಆನಂದ. ಈ ಅಂಶದಿಂದ ತನ್ನಲ್ಲಿರುವ ಜ್ಞಾನವನ್ನು ಹಂಚಬೇಕು ಎನ್ನುವ ಉದ್ದೇಶದಿಂದ ಬರವಣಿಗೆಯನ್ನು ಮುಂದುವರೆಸಿ ಬರೆದರು. ಅದೇ...

ಕಣ್ಮರೆಯಾದ ಕನ್ನಡ ಇದು ಹೆಸರೇ ಸೂಚಿಸುವಂತೆ ಇದು ದುರ್ಬಲಗೊಂಡಿರುವುದಕ್ಕೆ ಕಾರಣವಾದ ಕಾರಣ ಮೀಮಾಂಸೆಗಳ ಪ್ರಶ್ನೆ ಇದ್ದರೆ ಕನ್ನಡದ ನೆಲೆಯಲ್ಲಿ ಕನ್ನಡಿಗರ ಮೂಲಿಗರು ಯಾರು ಉಗಮ ವಿಕಾಸ ಕುರಿತು ಬರೆದರು. ಸಮಾಜಕ್ಕಾಗಿ ತನ್ನನ್ನು ಯಾವ ಬಗೆಯಿಂದಲಾದರೂ ಉಪಯುಕ್ತನನ್ನಾಗಿ ಮಾಡಿಕೊಳ್ಳಬೇಕು. ಹಾಗಾಗಿ ಬರವಣಿಗೆಯೇ ಸೂಕ್ತ ಎಂದು ಎರಡಿಲ್ಲದ ಬಾಳು ಗುರಿಯಾದರೆನೇ ನಾಡಿನ ಏಳ್ಗೆಯಾಗುವುದು ಎಂಬುದು ನನ್ನ ನಂಬುಗೆ. ಈ ವಾಕ್ಯವು ಒಂದೇ ಅರ್ಥ ಸೂಚಿಸುತ್ತದೆ. ಹಾಗೆಂದರೆ ತಾವು ಬರೆದ ಬರವಣಿಗೆ ಬೇರೆಯಲ್ಲ ಹಾಗೂ ತಾವು ಬೇರೆಯಲ್ಲ. ಅವು ಒಂದೇ ಆದಾಗ ಬರೆದ ಹಾಗೆ ತಾವು ಅನುಸರಿಸಿದಾಗ ನಾಡಿನ ಏಳ್ಗೆ ಸಾಧ್ಯ. ಹಾಗಾಗಿ ಇವರು ಈ ಎರಡಿಲ್ಲದ ಬಾಳುವೆಯನ್ನು ಮೈಗೂಡಿಸಿಕೊಂಡು ತನ್ನನ್ನು ವ್ಯಕ್ತಿ ವಿಶಿಷ್ಟ ಸಿಂಧುವನ್ನಾಗಿಸಿಕೊಂಡುಬಂದರು. ತತ್ವಜ್ಞಾನದ ಪರಂಪರೆಯ ಬೆಳವಣಿಗೆಯನ್ನು ಮತ್ತೊಂದು ಕಡೆ ಹೇಳುತ್ತಾರೆ. ಈ ಲೇಖನದಲ್ಲಿ ತಾವು ವೈಚಾರಿಕ ನೋಟ ಹಾಗೂ ಬಾಲ್ಯದ ಅನುಭವಗಳು ತುತ್ತು ಊಟಕ್ಕಾಗಿ ಬೇರೆ ಬೇರೆ ಪತ್ರಿಕೆಗಳಲ್ಲಿ ಕೆಲಸಮಾಡಿ ಅಪಾರ ಓದಿನ ವಿದ್ವತ್ತಿನ ಮೂಲಕ ಲೇಖನ ಬರೆದಿರುವುದು ಈ ಲೇಖನದಲ್ಲಿ ಕಂಡುಬರುತ್ತದೆ. ಹಾಗೂ ಇದು ಲೇಖನ ಸ್ವಾತಂತ್ರ್ಯ ಹೋರಾಟದ ಚಿತ್ರಣದೊಂದಿಗೆ ಸಾಗುತ್ತಾ ಅವರಿಗೆ ಒದಗಿದ ಸ್ಫೂರ್ತಿಯನ್ನು ವ್ಯಕ್ತಗೊಳಿಸುತ್ತದೆ. ಹೀಗೆಯೇ ಪ್ರತಿಯೊಬ್ಬ ಲೇಖಕರು ತಾವು ಬಾಲ್ಯದಲ್ಲಿಯ ಬಡತನ ವಿವಿಧ ಓದುಗಳು ಹಾಗೂ ಪ್ರಭಾವ ಬೀರಿದ ಅಂಶಗಳು ಬರವಣಿಗೆಗೆ ಸಹಾಯಕವಾಗುವಂತೆ ಶಂಭಾ ಅವರಿಗೂ ಹೀಗೆಯೇ ಪ್ರಭಾವ ಬೀರಿದೆ. ಇದರಲ್ಲಿ ಕಾಣುವ ಮತ್ತೊಂದು ಪ್ರಮುಖ ಅಂಶವೆಂದರೆ ದೇಶಸೇವೆ ಮಾಡಬೇಕು ಎಂಬ ಅಂಶಕ್ಕೆ ಒತ್ತುಕೊಟ್ಟಿರುವುದು ಕಂಡುಬರುತ್ತದೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಸತ್ಯ ಸಂಶೋಧನೆಗಾಗಿ
* ನಾಡಿಗಾಗಿ ಏನಾದರೂ ಮಾಡಬೇಕು. ನಿಜವನರಿತು ಬಾಳಲು
* ಪ್ರಾಥಮಿಕ ಶಿಕ್ಷಕರಾದ "ಅಯ್ಯನವರ" ಪ್ರೋತ್ಸಾಹ
* ಅಸಹಕಾರ ಆಂದೋಲನ ಸಂದರ್ಭ
* ಗಾಂಧೀಜಿಯವರ ಸರ್ವೋದಯ, ಸ್ವರಾಜ್ಯ ಕಲ್ಪನೆ
* ಲೋಕಮಾನ್ಯ ತಿಲಕರ ಹಾಗೂ ಅರವಿಂದ ಘೋಷರ ಚರಿತ್ರೆ ಪುಸ್ತಕ
* ಕರ್ಮವೀರ ವಾರಪತ್ರಿಕೆಯಲ್ಲಿ ಬರೆದ ಲೇಖನಗಳು
* ಅಪಾರ ಓದಿನ ವಿದ್ವತ್ತು
* ಬಾಲ್ಯದ ಬಡತನ
* ತೀವ್ರವಿಚಾರಿ ತರುಣರ ಭೇಟಿ

# "ನಾನು ಮತ್ತು ಸಂಶೋಧನೆ"

ಡಾ. ಎಂ.ಎಂ. ಕಲಬುರ್ಗಿ

ಕನ್ನಡ ಹಿರಿಯ ಸಂಶೋಧಕರಲ್ಲೊಬ್ಬರಾದ ಡಾ. ಎಂ.ಎಂ. ಕಲಬುರ್ಗಿಯವರು ಹತ್ತು ಹಲವು ಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆಗುರುತುಗಳನ್ನು ಬಿಟ್ಟಿದ್ದಾರೆ. ಇವರ ಸಂಶೋಧನೆಯಲ್ಲಿ ವಿಚಾರಗಳ ಸ್ವಂತಿಕೆಯಿದೆ. ಪಾಂಡಿತ್ಯದಿಂದ ಮುಕ್ತವಾದ ಬರಹ ಬಹುಶಿಸ್ತೀಯ ಅಧ್ಯಯನ ಸಂಶೋಧನೆಗೆ ಸಾಮಾಜಿಕ ಮುಖ ಜೋಡಿಸುವ ವೈಶಿಷ್ಟ್ಯ ದೇಸೀ ದೃಷ್ಟಿಕೋನ ಇವೆಲ್ಲ ಕೊನೆಗೊಳ್ಳುವುದು ಸಂಸ್ಕೃತಿ ಶೋಧದಲ್ಲಿ. ಹಾಗಾಗಿ ಸಮಗ್ರ ಸಂಶೋಧಕರಾಗಿ ರೂಪಗೊಂಡಿದ್ದಾರೆ. ವಿಶಿಷ್ಟವಾದ ಸಂಶೋಧನೆಯಿಂದ ಎಲ್ಲರ ಗಮನ ಸೆಳೆದಿದ್ದಾರೆ.

ಎಲ್ಲ ರಾಜ್ಯಗಳಂತೆ ಕನ್ನಡದ ಮೇಲೆಯೂ ಪ್ರಾಚೀನ ಕಾಲದಲ್ಲಿ ಸಂಸ್ಕೃತ, ಆಧುನಿಕ ಕಾಲದಲ್ಲಿ ಇಂಗ್ಲೀಷ್ ಭಾಷೆ, ಸಾಹಿತ್ಯಗಳು ತಮ್ಮ ತಮ್ಮ ಪ್ರಭಾವ ಬೀರಿವೆ. ಹಾಗಿಯೇ ತಮ್ಮ ಸಂಶೋಧನಾಕಾರ್ಯಕ್ಕೂ ಸಂಸ್ಕೃತ ಹಾಗೂ ಇಂಗ್ಲೀಷ್ ಭಾಷೆಗಳೂ ಅದರಲ್ಲಿಯ ನವೀನ ವಿಚಾರಗಳು ಹೊಸತನದ ಅಂಶಗಳು ತಮ್ಮ ಹೊಸ ಸಂಶೋಧನೆಯತ್ತ ಕೊಂಡೊಯ್ಯಲು ಸಹಾಯಕಾರಿಯಾಗಿದೆ. ಹಾಗೂ "ಅವಿಭಕ್ತ ಪ್ರಜ್ಞೆ ಮತ್ತು ಶ್ರಮ ಸಂಸ್ಕೃತಿ ತಮ್ಮ ಸಾಹಿತ್ಯ ವ್ಯಕ್ತಿತ್ವವನ್ನು ರೂಪಿಸಲು ಸಹಾಯಕಾರಿಯಾಗಿದೆ. ಅಂದರೆ ಇಲ್ಲಿ ಎಲ್ಲರೊಟ್ಟಿಗಿನ ಬದುಕು ಅದರೊಳಗಿನ ಎಲ್ಲರೂ ಶ್ರಮವಹಿಸಿ ದುಡಿಯುವುದು ಮತ್ತು ಕನ್ನಡ ಸಾಹಿತ್ಯ ಅದರಲ್ಲೂ ಸಂಶೋಧನಾ ಕ್ಷೇತ್ರಕ್ಕೆ ವಿಚಾರಗಳ ಸ್ವಂತಿಕೆಯಿಂದ ಪಾಂಡಿತ್ಯದಿಂದ ಸಂಶೋಧನೆ ನಡೆಸುತ್ತಾ ಬರೆದಿದ್ದಾರೆ.

ಇಲ್ಲಿ ಅವಿಭಕ್ತ ಕುಟುಂಬದ ವ್ಯಕ್ತಿಗೆ ಪರಿವಾರ ಮತ್ತು ಪರಂಪರೆಗಳ ಬಗೆಗೆ ಅಗಾಧ ಪ್ರೀತಿ ಕೌಟುಂಬಿಕ ಪ್ರತಿಷ್ಠೆಯ ಬಗೆಗೆ ಸದಾ ಎಚ್ಚರಿಕೆಯ ಕಾರಣವಾಗಿ ದೇಶವನ್ನು ಪ್ರೀತಿಸುವ ಪರಂಪರೆಯನ್ನು ಹುಡುಕುವ ಸಂಶೋಧಕರಾಗಿ ಕಾಣಿಸಿಕೊಂಡಿದ್ದಾರೆ.

ತಾವು ಸಂಶೋಧಕರಾಗಿ ಬರುವ ಪೂರ್ವದಲ್ಲಿ ದಿನನಿತ್ಯದ ಕಿರಿಕಿರಿಗಳನ್ನು ಮರೆಯಲು ನನಗೆ ಬರವಣಿಗೆಯೇ ಅನಿವಾರ್ಯ ದಾರಿಯಾಗಿ ಪರಿಣಮಿಸಿತು. ಇಲ್ಲಿ ಅವುಗಳಿಂದ ಹೊರ ಬರಲು ಅಲಂಕಾರ, ಛಂದಸ್ಸು, ನಿಘಂಟು, ಹಸ್ತಪ್ರತಿ, ಗ್ರಂಥ ಸಂಪಾದನೆ, ಜಾನಪದ ಇವುಗಳನ್ನು ಓದಿನ ಮೂಲಕ ಮೈಗೂಡಿಸಿಕೊಂಡು, ಭಾಷೆ, ಸಾಹಿತ್ಯ, ಸಮಾಜ, ಧರ್ಮ, ಇತಿಹಾಸ ಹೀಗೆ ಸಂಸ್ಕೃತಿಯ 'ಶೋಧ'ದಲ್ಲಿ ಸಂಶೋಧನೆ ಮಾಡಿರುವುದು ಕಾಣಬಹುದು. ಏಕೆಂದರೆ ತಾವು ಕಳೆದು ಹೋದ ಕನ್ನಡ ಸಾಹಿತ್ಯದ ಮೊದಲ ಘಟ್ಟ ಈ ವಿಷಯ ಕುರಿತಾದ ಸಂಶೋಧನಾ ಅಧ್ಯಯನವು ಕೈಗೊಳ್ಳುವುದರ ಮೂಲಕ ಇಡಿ ಸಾಹಿತ್ಯದ ಆಶಯ ಹಾಗೂ ಆಕೃತಿಗಳನ್ನು ಚರ್ಚಿಸಿದ್ದಾರೆ. ಹೀಗೆ ಅನೇಕ ಪುಸ್ತಕಗಳ ಓದಿನ ಬಲದಿಂದ ಇವರ ಸಂಶೋಧನೆ ಮುಂದೆ ಸಾಗಿರುವ ಅಂಶ ಈ ಲೇಖನದಲ್ಲಿ ಕಾಣಿಸುತ್ತದೆ.

ನಂತರ ಕಲಬುರ್ಗಿಯವರು ಸಂಶೋಧನೆಯನ್ನುವುದು ವಿವರಣೆ ವಿಶ್ಲೇಷಣೆ, ವ್ಯಾಖ್ಯಾನ. ಈ ನಿಟ್ಟಿನಲ್ಲಿ ಸಂಶೋಧನೆ ಸಾಗಿರುವುದರ ಕುರಿತು ಚರ್ಚಿಸಿದ್ದಾರೆ. ಹಾಗೆಯೇ ಇವರ ಅನೇಕ ಲೇಖನಗಳು ಆ ಮಾದರಿಯಲ್ಲಿ ಬಂದಿರುವುದು ಕಾಣಬಹುದು. ಜೊತೆಗೆ ಶೋಧವೆನ್ನುವುದು ಆಕರವಾಗಿಯೇ ಇರಲಿ ವಿಶ್ಲೇಷಣಾ ಮುಖಿಯೇ ಇರಲಿ ಭೂತಕಾಲಕ್ಕೆ ಸ್ಥಗಿತಗೊಳ್ಳದೆ ವರ್ತಮಾನವನ್ನು ಪ್ರಭಾವಿಸುವಲ್ಲಿ ಅದರ ಸಾರ್ಥಕತೆ ಕಾಣವಂತೆ ಸಂಶೋಧನೆಯಲ್ಲಿ ಆರೋಗ್ಯಕರ ಬೆಳವಣಿಗೆ ಕಾಣುತ್ತೇವೆ. ಸಾಹಿತ್ಯದಲ್ಲಿಯಂತ ಸಂಶೋಧನೆಯಲ್ಲಿಯೂ ಕಾಲಕಾಲಕ್ಕೆ ಹೊಸ ಹೊಸ ಒಲವುಗಳು ಕಾಣಿಸಿಕೊಳ್ಳುವುದು ಸಹಜ ಕನ್ನಡ ಸಂಶೋಧನೆ ಎನ್ನುವುದು ನವೋದಯ ಕಾಲದಲ್ಲಿ ಅಂಕುರಿಸಿದ ಜ್ಞಾನಶಿಸ್ತು. ರಾಷ್ಟ್ರೀಯ ಆಂದೋಲನದ ಆ ಸಂದರ್ಭದಲ್ಲಿ ಪರಂಪರೆಯನ್ನು ವೈಭವೀಕರಿಸುವುದು ಇಂತಹ ಸಂಶೋಧನೆ ಪರಿಶೀಲನೆ ಅಗತ್ಯವಾಗಿದೆ ಎಂದು ಕುರಿತು ಚರ್ಚಿಸಿದ್ದಾರೆ.

ಸಂಶೋಧಕರು ಇನ್ನೊಬ್ಬರು ಪ್ರಕಟಿಸಿದ ಆಕರಗಳನ್ನು ಬಳಸಿಕೊಂಡು ಸಂಶೋಧನೆಯನ್ನು ಪೂರೈಸುತ್ತಾರೆ. ತಮ್ಮ ನೇತೃತ್ವದಲ್ಲಿ ಬೆಳಕಿಗೆ ಬಂದ ಆಕರಗಳ ಶೋಧ, ಪ್ರಕಟಕನ ಕಾರ್ಯ, ಹಸ್ತಪ್ರತಿಗಳ ಶೋಧ, ಐದು ಸಾವಿರ ಕಟ್ಟಗಳ ಸಂಗ್ರಹ ಹೀಗೆ ಇವರ ಕಾರ್ಯ ವೈಖರಿಯನ್ನು ಈ ಲೇಖನದಲ್ಲಿ ಚರ್ಚಿಸಿದ್ದಾರೆ. ನಂತರ ಇತಿಹಾಸ ಕೃತಿಗಳನ್ನು ಶಾಸನಗಳ ವಿಶೇಷವಾಗಿ ಕಾರ್ಯನಿರ್ವಹಿಸಿ ಪ್ರಕಟಿಸಿದ್ದಾರೆ.

ಇವರ ಸಂಶೋಧನಾ ಕೃಷಿ, ಗ್ರಂಥ ಪ್ರಬಂಧ, ಶಾಸ್ತ್ರ ಸಂಪಾದನಾ ಚಾರಿತ್ರ್ಯ, ಟೀಕಿನ ವಚನಗಳು, ಕೈಫಿಯತ್ತು ಜೀವನ ಚರಿತ್ರೆ ಹೀಗೆ ಹಲವು ಮಗ್ಗಲುಗಳಲ್ಲಿ ತಮ್ಮ ಸಂಶೋಧನೆ ಸಾಗಿಬಂದದ್ದನ್ನು ಕುರಿತು ಚರ್ಚಿಸಿದ್ದಾರೆ. ಈ ಲೇಖನದಲ್ಲಿ ಸ್ಥಿರ ಸಮಾಜದ ಸೃಷ್ಟಿಯಾಗಿರುವ ಹಳೆಯ ಮಾತೃಭಾಷೆ ಪರಿಕಲ್ಪನೆ ಇಂದು ಬದಲಾದ ಚರಸಮಾಜದಲ್ಲಿ ಅರ್ಥಕಳೆದುಕೊಳ್ಳತೊಡಗಿರುವುದಿಂದ ಪಿತೃಪ್ರಧಾನ ಸಮಾಜ ಕಾಣುತ್ತೇವೆ. ಇವುಗಳ ಮರು ವ್ಯಾಖ್ಯಾನ ಕುರಿತು ಈ ಲೇಖನದಲ್ಲಿ ಚರ್ಚಿಸಿದ್ದಾರೆ ಅದರ ಮರು ವ್ಯಾಖ್ಯಾನ ಕುರಿತು ಚಿಂತಿಸಿರುವುದು ಕಂಡುಬರುತ್ತದೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಅವಿಭಕ್ತ ಕುಟುಂಬದ ವ್ಯಕ್ತಿಗೆ ಪರಿವಾರ ಮತ್ತು ಪರಂಪರೆಗಳ ಬಗೆಗಿನ ಅಗಾದ ಪ್ರೀತಿ, ಕೌಟುಂಬಿಕ ಪ್ರತಿಷ್ಠೆಯ ಬಗೆಗಿ ಸದಾ ಎಚ್ಚರ
* ದೇಶವನ್ನು ಪ್ರೀತಿಸುವ ಪರಂಪರೆಯ ಹುಡುಕಾಟದ ಸಂಶೋಧಕರಾಗಿ ಕಾಣಿಸಿಕೊಂಡಿರುವ ಅಂಶ
* ಕಳೆದುಹೋದ ಕನ್ನಡ ಸಾಹಿತ್ಯದ ಮೊದಲ ಘಟ್ಟ ಪರಿಚಯ
* ಸಂಶೋಧನೆಯಲ್ಲಿ ಹೊಸ ಹೊಸ ಒಲವುಗಳು ಕಾಣಿಸಿಕೊಳ್ಳುವಿಕೆಯ ಬಗ್ಗೆ ಚರ್ಚೆ

# ಅಡಿ ಟಿಪ್ಪಣಿಗಳು

೧. ಡಾ. ಅಮರೇಶ ನುಗಡೋಣಿ (ಸಂ) ನಾನೇಕೆ ಬರೆಯುತ್ತೇನೆ, ಪುಟ-೭

೨. ಅದೇ ಪುಟ-೯

೩. ಅದೇ ಪುಟ-೧೧

೪. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ ಪುಟ-೨೦೧

# ೪

೧. ಗೀತಾ ನಾಗಭೂಷಣ

೨. ಜಂಬಣ್ಣ ಅಮರಚಿಂತ

೩. ಎಸ್.ಜಿ. ಸಿದ್ಧರಾಮಯ್ಯ

೪. ಫಕೀರ್ ಮಹಮದ್ ಕಟ್ಪಾಡಿ

೫. ಕೆ. ಸತ್ಯನಾರಾಯಣ

೬. ಎಚ್.ಎಸ್. ಶಿವಪ್ರಕಾಶ

೭. ನಾಗೇಶ ಹೆಗಡೆ

ಈ ಲೇಖಕರು ೭೦ರ ದಶಕದಿಂದ ತಮ್ಮ ಚಿಂತನೆಗಳ ಮೂಲಕ ಕನ್ನಡ ಸಾಹಿತ್ಯವನ್ನು ಬಲಪಡಿಸಿದವರು. ಸಮಾಜ ಮುಖಿ ಚಿಂತನೆ ಇವರ ಗುರಿ. ಆದರೆ ಸಮಾಜದ ಅಂಚಿನಲ್ಲಿ ಬದುಕುವವರು ಬಡವರು, ದೀನದಲಿತರು, ಬುಡಕಟ್ಟಿನವರು, ಜನಪದರು ಮುಂತಾದವರು ಇವರ ಕಾಳಜಿಯಲ್ಲಿ ಸಾಹಿತ್ಯವನ್ನು ರಚಿಸಿದ್ದಾರೆ. ಸಮಾಜದ ದುರ್ಬಲ ವರ್ಗವನ್ನು, ಜಾತಿಗಳನ್ನು ಕುರಿತು ಮತ್ತು ಮದ್ಯಮ ಕುಟುಂಬಗಳ ಬದುಕನ್ನು ಕುರಿತು ಆಲೋಚಿಸಿದವರು. ಸಮಾಜದ ಅಂಚಿನಲ್ಲಿರುವ ದಲಿತರ ಆಧ್ಯಾತ್ಮವನ್ನು ಪ್ರಮುಖವಾಗಿ, ಪ್ರಧಾನವಾಗಿ ಪರಿಗಣಿಸಿದವರು. ಇವರು ತಮ್ಮ ಸಾಹಿತ್ಯದ ಮೂಲಕ ತಮ್ಮ ತಾತ್ವಿಕತೆಯನ್ನು ಗುರತಿಸಿಕೊಂಡು ಸಾಹಿತ್ಯ ಮತ್ತು ಬದುಕು ಎರಡೂ ಬೇರೆ ಬೇರೆ ಅಲ್ಲ ಎಂದು ಆಲೋಚಿಸಿ ಸಾಹಿತ್ಯ ಚಿಂತನೆಯನ್ನು ಮಾಡಿದ್ದಾರೆ. ಹಾಗಾಗಿ ಇವರ ಬರಹಗಳನ್ನು ಇಲ್ಲಿ ಅಧ್ಯಯನಕ್ಕೆ ತೊಡಗಿಸಲಾಗಿದೆ.

# ನಾನೇಕೆ ಬರೆಯುತ್ತೇನೆ?

**ಡಾ|| ಗೀತಾ ನಾಗಭೂಷಣ**

ಮಹಿಳಾಪರ ಚಿಂತನೆಗಳಿಂದ ಸಾಹಿತ್ಯ ರಚನೆ ಮಾಡುತ್ತಿರುವ ಪ್ರಮುಖ್ಯ ಕನ್ನಡ ಲೇಖಕಿಯರಲ್ಲಿ ಇವರು ಒಬ್ಬರು ಪ್ರಸ್ತುತ ಗುಲ್ಬರ್ಗಾದಲ್ಲಿ ನೆಲೆಸಿದ್ದಾರೆ ಮಹಾಮನೆ, ಮರಳಿನ ಮನೆ ಚಂದನದ ಚಿಗುರು, ಹಸಿಮಾಂಸ, ಮತ್ತು ಹದ್ದಗಳು ಮಾಪುರ ತಾಯಿಮಕ್ಕಳು ಬದುಕು, ಇವು ಇವರ ಕೃತಿಗಳು ಇವರು ಹೈದ್ರಾಬಾದ್ ಕರ್ನಾಟಕದ ಭಾಷೆಯನ್ನು ಸಾಮರ್ಥವಾಗಿ ಬಳಸಿ ಗೌರವ ಪ್ರಶಸ್ತಿಗೆ ಭಾಜನರಾಗಿದ್ದಾರೆ.

ಪ್ರಸ್ತುತವಾಗಿ ಈ ಲೇಖನದಲ್ಲಿ ಬರವಣಿಗೆಯನ್ನುವುದು ಹೂ ಅರಳುವಷ್ಟು ಸುಲಭವಲ್ಲ. ಕೋಗಿಲೆ ಹಾಡುವಷ್ಟು ಸಹಜವಾಗಿ ಕತೆ, ಕಾದಂಬರಿ ಬರೆಯಲು ಆಗುವುದೇ ಇಲ್ಲ ಎಂದು ಹೇಳುತ್ತಾರೆ.[1] ಅಂದರೆ ಕತೆ ಕಾದಂಬರಿ ಬರೆಯಲು ನಮ್ಮಲ್ಲಿರುವ ಅನುಭವವನ್ನು ಅಭಿವ್ಯಕ್ತಿಸಲು ಅಷ್ಟು ಸುಲಭದ ಕೆಲಸವಲ್ಲ ಒಂದು ಅನುಭವವನ್ನು ಕತೆಯಾಗಿಸಬೇಕಾದರೆ ಅದು ಮನದಲ್ಲಿ ತಿದ್ದಿ ಮಿದ್ದಿ ಆಲೋಚಿಸಿ ಅದರ ಸಾಧಕ ಭಾದಕಗಳನ್ನು ತಿಳಿದು ಕತೆಗೆ ಒಂದು ಚೌಕಟ್ಟನ್ನು ಕಟ್ಟಬೇಕಾಗುತ್ತದೆ. ಆದರೆ ಹೂ, ಕೋಗಿಲೆ, ಅವು ಸಹಜವಾಗಿ ತಮ್ಮ ಕಾರ್ಯವನ್ನು ತಾವು ಮಾಡುತ್ತವೆ. ಆದರೆ ಈ ಬರವಣಿಗೆ ಹಾಗಲ್ಲ ಅದು ಅಷ್ಟೆ ಕಷ್ಟಕರವಾದದ್ದು ಎಂದು ತಿಳಿಯಬಹುದು.

ಗೀತಾ ನಾಗಭೂಷಣರ ನೇರವಾದ ನುಡಿಗಳು ಅತ್ಯಂತ ಸತ್ಯದಿಂದ ಕೂಡಿರುವಂತಹವು ಇವರು ಯಾಕೆ ಬರೆಯುತ್ತೇನೆ ಎಂಬ ಪ್ರಶ್ನೆಗೆ ಖುಷಿಗಾಗಿ ಸಂತೋಷಕ್ಕಾಗಿ ಬರೆಯುತ್ತೇನೆ ಎಂದರೂ ವಾಸ್ತವದ ಬದುಕಿನ ಅಂಶದ ಚರ್ಚೆ ಮಾಡುತ್ತಾರೆ. ಅದೇ ಜನರಿಗಾಗಿ ಎನ್ನುವ ಸತ್ಯ"[2] ಅಂದರೆ ಬರೆದದ್ದನ್ನು ಜನರಿಗೆ ತಟ್ಟಬೇಕು, ಅದು ನಗಿಸಬೇಕು, ಚಚ್ಚಬೇಕು, ಸಿಟ್ಟಿಗೆ ತರಿಸಬೇಕು, ಹಾಗೆಯೇ ಖುಷಿಯನ್ನು ಕೋಡಬೇಕು ಹೀಗೆ ಜನರಿಗಾಗಿ ಮತ್ತು ಅವರಿಂದ ಹೊಗಳಿಕೆ ತೆಗಳಿಕೆಗ[3] ಪಾತ್ರರಾಗುವುದು ಸಾಮಾನ್ಯ ಸಂಗತಿ.

ಕಲೆಗಾಗಿ ಕಲೆ, ಸಾಹಿತ್ಯಕ್ಕಾಗಿ ಸಾಹಿತ್ಯ ಅನ್ನುವ ದಿನಗಳು ಇದ್ದವು ಆದರೆ ಇಂದು ಬದುಕಿಗಾಗಿ ಸಾಹಿತ್ಯ ಅನ್ನುವಂತಾಗಿದೆ. ಏಕೆಂದರೆ ಅಂದು ರಾಜಾಶ್ರಯದಲ್ಲಿ ಜೀವನ ಸಾಗುತ್ತಿತ್ತು. ಹಾಗಾಗಿ ರಾಜನ ಕುರಿತಾದ ಅನೇಕ ಕೃತಿಗಳು ಕಾಣಬಹುದು ಇಂದು ಯಾರ ಹಂಗಿಲ್ಲದ ಕಾರಣ ಅದು ಶ್ರೀ ಸಾಮಾನ್ಯರ ಸಾಹಿತ್ಯವಾಗಿದೆ. ಹೆಗೆಂದರೆ ಉಂಡುಟ್ಟು ತಿಂದು ತೇಗಿದವರ ಬಗ್ಗೆ ಬರೆಯುಟ್ಟಿರುವ ಅಂದಿನ ಸಾಹಿತ್ಯಕ್ಕೆ ವಿರುದ್ದವಾಗಿ ಹಸಿವು ಸಂಕಟಗಳ ಬಗ್ಗೆ, ನೋವು ಅನುಮಾನಗಳ ಬಗ್ಗೆ, ದೌರ್ಜನ್ಯ ದಬ್ಬಾಳಿಕೆಗಳ ಬಗ್ಗೆ, ಶೋಷಣೆ ಪ್ರತಿಭಟನೆಗಳ ಬಗ್ಗೆ, ಬರೆಯುವ ಕೈಗಳೂ ಬಂದಿವೆ. ಹಾಗಾಗಿ ಇಂದು ಬದುಕಿಗಾಗಿ ಸಾಹಿತ್ಯ ಎನ್ನುವ ಹಾಗೆ ಬರವಣಿಗೆ ಸಾಗುತ್ತಿದೆ.

ಒಬ್ಬ ದಲಿತ ಬಂಡಾಯ ಮಹಿಳಾ ಲೇಖಕಿಯಾದ ಇವರು ನಾನು ನನ್ನ ಬರಹದಲ್ಲಿ ಈ ದಲಿತ ಜಗತ್ತಿನ ಶೂದ್ರ ಲೋಕದ ಹೆಣ್ಣು ಮಕ್ಕಳ ಬದುಕನ್ನು ಬಯಲಗಿಡುವ ಪ್ರಯತ್ನ ಮಾಡುತ್ತಿದ್ದೆನೆ ಉದ್ದೇಶ ಪೂರ್ವಕವಾಗಿಯೇ ಪ್ರಯತ್ನ ಮಾಡುತ್ತಿದ್ದೇನೆ ಎಂದು ಹೇಳುತ್ತಾರೆ. ಅಂದರೆ ಈ ಹಿಂದೆ ದಲಿತ ಲೋಕದ ಹೆಂಗಸರ ಬಗ್ಗೆ ಇಲ್ಲಿಯವರೆಗಿನ ಯಾವ ಚರಿತ್ರೆಯಲ್ಲಿಯು ದಾಖಸಲ್ಪಟ್ಟಿಲ್ಲ ಬರಿ ರಾಜ ರಾಣಿಯರ, ದೇವದಾಸಿಯರ, ಚೆಲುವೆಯರ, ಅಂದಗಾತಿಯರ, ಬಗ್ಗೆ ಚಿತ್ರಿಸುತ್ತಾ ಬಂದಿರುವರು ಶೂದ್ರವರ್ಗದ ಸಾಮಾನ್ಯ ಹೆಣ್ಣಿನ ಬದುಕಿನ ಕಡೆಗೆ ದಿವ್ಯನಿರ್ಲಕ್ಷ್ಯ ತಾಳಿದ್ದರಿಂದ ರಟ್ಟೆ ಗಾತ್ರದವರೆಗೂ ದುಡಿಯುವ ಕೂಲಿಮಾಡಿ ಹೊಟ್ಟೆ ತುಂಬಿಸಿಕೊಳ್ಳುವ ಶ್ರಮಜೀವಿಗಳಾದ ಶೂದ್ರ ಚಿತ್ರಣ ಬರೆಯಬೇಕೆಂಬ ಉದ್ದೇಶದಿಂದ ಅವರು ಬದುಕು ಕಾದಂಬರಿ ನೋಡಬಹುದು.

ಆಂತರ್ಯದ ವೇದನೆಗೆ ನಾಲಿಗೆಯಾಗುವ ಮೂಕ ಸಹನೆಗೆ ದನಿಯಾಗುವ ಹೆಂಗಸರ ಮೇಲಿನ ದಬ್ಬಾಳಿಕೆ ದೌರ್ಜನ್ಯಗಳ ಬಗ್ಗೆ ಹಿಂಸೆ ಕಾರ್ಯಗಳ ಬಗ್ಗೆ ಇವರ ಈ ಅಂಶಗಳು ಇವರೊಳಗಿನ ತೀವ್ರವಾದ ಒತ್ತಡ ಹೊರಹಾಕಬೇಕೆಂಬ ಕಿಚ್ಚು ಬರೆಯವುದಕ್ಕೆ ಪ್ರೇರಣೆ ನೀಡಿರಬೇಕು ರಾಯಚೂರು ಜಿಲ್ಲೆಯ ಕುದರೆಮೋತಿ ಪ್ರಕರಣ[3] ಇಲ್ಲಿ ಶೂದ್ರ ಹೆಂಗಸರಿಬ್ಬರನ್ನು ಬೆತ್ತಲೆಗೊಳಿಸಿ ಮೆರವಣಿಗೆಯ ಮಾಡಿದ್ದ ಘಟನೆ ಇವರಿಗೆ ತಿಳಿದು ಅಲ್ಲಿ ಸಂದರ್ಶನ ಮಾಡಿ ತರಂಗ ಪತ್ರಿಕೆಗೆ ಪ್ರಕಟಿಸಿದ್ದರು ಎಕೆಂದರೆ ಈ ಘಟನೆಯ ಒತ್ತಡವೇ ಇವರಿಗೆ ಇನ್ನೂ ಹೆಚ್ಚು ಸಶಕ್ತವಾಗಿ ಎಲರಲ್ಲಿಯೂ ಜಾಗೃತಿ ಮೂಡಿಸಲು ಹಾಗೂ ಗುಡಿಸಲಿನ ಮೇಲೆ ನಡೆಯುವ ದೌರ್ಜನ್ಯ ಹಿಂಸೆ ಖಂಡಿಸುವ ಉದ್ದೇಶದಿಂದ ತಮ್ಮ ಬರಹಕ್ಕೆ ಇನ್ನೂ ಶಕ್ತಿ ಒದಗಿಬಂದಿರುವುದು ಕಾಣುತ್ತೀವೆ.

ಇವರೊಬ್ಬ ಶೂದ್ರಬರಹಗಾರ್ತಿಯಾದ್ದರಿಂದ ಸಕಲ ಸೌಕರ್ಯಗಳು ಸಿಗದೆ ಸುಖದ ಸುಪ್ಪತ್ತಿಗೆಯಲ್ಲಿರುವ ವೈದಿಕ ಪರಂಪರೆಯನ್ನು ಮೈಗೂಡಿಸಿ ಕೊಂಡು ಬರೆಯುವ ಬರಹಗಾರ್ತಿಯರಿಗೆ ಶೋಷಣೆಗೆ ಒಳಗಾದ ಮಹಿಳೆಯ ಸ್ಥಿತಿ ಅವರಿಗಿರುವುದಿಲ್ಲ. ಹಾಗಾಗಿ ಇವರೇ ಅವರ ಬದುಕಿನ ಚಹರೆಗಳನ್ನು ಬಚ್ಚಿಡಲು ಪ್ರಯತ್ನಿಸಿರುವುದು ಕಾಣುತ್ತೇವೆ. ಇವರಲ್ಲದೆ ಇತರ ಶೂದ್ರ ಬರಹಗಾರ್ತಿಯರಿಗೆ ಮಾದರಿಯಾಗಿ ಬರೆಯಬೇಕು ಎಂಬ ಅಂಶ ಮನಗಾಣಬಹುದು. ಏಕೆಂದರೆ ಕೊಳಗೇರಿಯ ಝೋಪಡಿಯ ಸಾಹಿತ್ಯಕ್ಕೆ ಈ ವರೆಗೂ ಯಾರು ಕೈಹಾಕದೆ ಇರದಿರುವುದನ್ನು ಮನಗೊಂಡು ಅದು ಮಹಿಳಾ ಲೇಖಕಿಯಾಗಿ ಗುಡಿಸಲ ಗೇರಿಯ ಮುರ್ಖ, ಮುಗ್ಧ ಅನಕ್ಷರಸ್ಥ ಅಮಾಯಕ ಹೆಂಗಸರ ಸ್ಥಿತಿಗತಿಯ ಬಗ್ಗೆ ಅವರಿಗೊಡ್ಡುವ ಆಸೆ ಆಮಿಷಗಳ ಬಗ್ಗೆ, ಅವರ ದಾರದ್ರ್ಯದ ಬಗ್ಗೆ, ಅವರ ರೀತಿ ರಿವಾಜುಗಳ ಬಗ್ಗೆ, ಕಾಮ ಪ್ರೇಮಗಳ ಬಗ್ಗೆ, ಅವರ ಪ್ರಣಯ ಹಾದರಗಳ ಬಗ್ಗೆ, ದಬ್ಬಾಳಿಕೆ ದೌರ್ಜನ್ಯಗಳನ್ನೊಳಗೊಂಡ ಲೈಂಗಿಕ ಶೋಷಣೆಯ ಬಗ್ಗೆ ಯಾವ ಮುಚ್ಚು ಮರೆಯಿಲ್ಲದೆ ಬರೆಯ ತೊಡಗಿದರು.

ಈ ಲೇಖನದಲ್ಲಿ ಪ್ರಮುಖವಾಗಿ ಶೂದ್ರ ಜಗತ್ತಿನ ಮತ್ತು ದಲಿತ ಜಗತ್ತಿನ ಹೆಂಗಸರ ಬದುಕಿನ ಹಲವು ಬಗೆಯ ನೋವು ಸಂಕಟಗಳನ್ನು ಅನಾವರಣಗೊಳಿಸಿ ಅವುಗಳ ಬಗ್ಗೆ ಚಿಂತಿಸಲು ಜನರ ಮನಸ್ಸನ್ನು ತಯಾರು ಮಾಡಲು ತಾವು ಉದ್ದೇಶಪೂರ್ವಕಾಗಿ ಬರವಣಿಗೆ ಕೈಗೊಂಡಿರುವುದು ಕಾಣುತ್ತೇವೆ.

ಮತ್ತೊಂದು ಅಂಶವೆಂದರೆ ಇವರದು ಗುಲ್ಬರ್ಗಾ ಜಿಲ್ಲೆಯ ಹಳ್ಳಿಗರ ಗಂಡುಬಾಷೆ ಚಂದ್ರಶೇಖರ ಕಂಬಾರರ ಸಿಂಗಾರವ್ವ ಮತ್ತು ಅರಮನೆ ದೇವನೂರು ಮಹಾದೇವರ ಕತೆಗಳನ್ನು ಓದಿ ತಾವು ತನ್ನ ಹಳ್ಳಿಯ ಪ್ರಾದೇಶಿಕ ಭಾಷೆಯನ್ನಾಗಿ ಜನರಿಗೆ ಪರಿಚಯಸುವ ಆಸೆಯಿಂದ ಅನೇಕ ಕಥೆ ಕಾದಂಬರಿ ಬರೆಯುವುದು ಮತ್ತು ಅವುಗಳ ವಸ್ತು ಕೆಳಗೇರಿಯಿಂದಲೇ ಇರುವುದು ಕಂಡು ಬರುತ್ತದೆ. ಏಕೆಂದರೆ ತಾವು ಕೊಳಗೇರೆಯಲ್ಲೇ ವಾಸ ಮಾಡಿದ್ದರಿಂದ.

ಇವರು ಬರೆಯುವುದು ಆನಂದಕಷ್ಟೆ ಅಲ್ಲ ಓದುಗರ ಖುಷಿಗೂ ಸಾಮಾನ್ಯ ಜನರಿಗೂ ಅರ್ಥವಾಗಿ ದಲಿತ ಶೂದ್ರ ಜಗತ್ತಿನ ಬವಣೆ ಸಮಸ್ಯೆಗಳು ಮನವರಿಕೆಮಾಡಿ ಸಂದಿಗೊಂದಿಗಳಲ್ಲಿಯ ಹೊಲಸಿನ ನೋವಿನ ದರ್ಶನ ಮೂಡಿಸುವುದು ಅವುಗಳ ಜೊತೆಗೆ ಹಸನುಗೊಳಿಸುವ ಅದನ್ನು ಪ್ರಚೋದಿಸುವ ಅಂಶಕ್ಕಾಗಿ ಬರೆದಿರುವುದು ಎಂಬ ಉತ್ತರ ಕಂಡುಕೊಳ್ಳಬಹುದು. ಹಾಗೆಯೆ ಎಲ್ಲಾ ಕವಿ ಲೇಖಕನಿಗೂ ಇರುವ ಹಾಗೆ ಇವರಿಗೂ ಜನಪ್ರೀಯತೆ ಹಣದ ಸ್ವಾರ್ಥ ಇದೆ ಎಂದು ಒಪ್ಪಿಕೊಂಡಿರುವುದು ಇವರ ಪ್ರಮಾಣಿಕತೆ ಎತ್ತಿ ತೋರಿಸುತ್ತಿದೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ವಾಸ್ತವ ಬದುಕಿನ ಅಂಶಗಳು ಜನರಿಗೆ ತಿಳಿಸಲು
* ಶೂದ್ರ ಹೆಣ್ಣುಮಕ್ಕಳ ಬದುಕನ್ನು ಬಯಲಿಗೆಳೆಯುವ ಪ್ರಯತ್ನ
* ಸಮಾಜದಲ್ಲಿಯ ಕ್ರೌರ್ಯ, ದೌರ್ಜನ್ಯಗಳ ಬಗ್ಗೆ ತೀವ್ರವಾದ ಒತ್ತಡ
* ಕುದರೆ ಮೋತಿ ಪ್ರಕರಣ
* ಅನ್ಯಾಯವನ್ನು ತುಳಿದು ನಿಲ್ಲಲು
* ಜನರಿಗಾಗಿ ಹೊಗಳಿಕೆಯ ಮತ್ತು ತೆಗಳಿಕೆಗಾಗಿ
* ಖುಷಿಗಾಗಿ, ಸಂತೋಷಕ್ಕಾಗಿ

# ನಾನೇಕೆ ಬರೆಯುತ್ತೇನೆ?

**ಶ್ರೀಜಂಬಣ್ಣ ಅಮರಚಿಂತ**

ರಾಯಚೂರಿನ ಅಮರಚಿಂತರು ಕನ್ನಡದ ಸತ್ವಯುತ ಕವಿಗಳಲ್ಲೊಬ್ಬರು ಆರೋಗ್ಯ ಇಲಾಖೆಯಲ್ಲಿ ಲೆಕ್ಕಾಧಿಕಾರಿಯಾಗಿರುವ ಇವರು ಕವಿಯಾಗಿ ತಮ್ಮ ಕಾವ್ಯಭಿವ್ಯಕ್ತಿಯಲ್ಲಿ ಸಮಾಜ ವಿಮರ್ಶೆಯನ್ನು ಮಡುತ್ತಾ ವಿಶಿಷ್ಟಾನುಭವಗಳಿಂದ ಬಂಡಾಯ ಕವಿಯಾಗಿ ಪ್ರತಿಬಿಂಬಿಸಿದ್ದಾರೆ. ಇವರಲ್ಲಿಯ ನೋವು ಕಾವ್ಯವಾಗುವುದೆಂದರೆ ಮಣ್ಣಲ್ಲಿ ಅಕ್ಷರಗಳು ಬಿರಿದಂತೆಯೆ.

ತಾವು ಯಾಕೆ ಬರೆಯುತ್ತೀರಿ ಎಂಬ ಪ್ರಶ್ನೆಗೆ ಮಾನವೀಯ ವ್ಯವಸ್ಥೆಗಾಗಿ ಎಂದು ಉತ್ತರ ಕೊಡುತ್ತಾರೆ. ಮಾನವೀಯತೆ ಎಂದರೆ ಪ್ರೀತಿ, ಕರುಣೆ, ಸತ್ಯ, ನ್ಯಾಯ, ಧರ್ಮ, ನಂಬಿಕೆ, ನೀತಿ ಇವುಗಳನ್ನು ಉಳಿಸಿಕೊಳ್ಳಲು ಹಾಗೂ ಅವುಗಳ ನಿರ್ಮಾಣಕ್ಕಾಗಿ ತಾವು ಬರಹ ಕೈಗೊಂಡಿದ್ದೇನೆ ಎನ್ನುತ್ತಾರೆ. ಹಾಗೆಯೇ ಇಲ್ಲಿ ತಮ್ಮ ಬಾಲ್ಯದ ಘಟನೆಯನ್ನು ವ್ಯಕ್ತಪಡಿಸಿದ್ದಾರೆ. ಅದು ಸ್ವಂತ ಮತ್ತು ಅಂಗಿ ಸ್ವಂತ ಅಸ್ತಿತ್ವಕ್ಕೆ ಹುಡುಕಾಟ ಮಾಡಲು ಪ್ರೇರೆಪಿಸುವ ಘಟನೆ ತಂದೆ ಹೋಟಲ್ಲಿನ ವ್ಯವಹಾರ ಮಾಡುತ್ತಿದ್ದರು. ಇವರು ಮಡಿವಾಳರು ಆದ್ದರಿಂದ ಊರಿನ ಬಟ್ಟೆಗಳನ್ನು ಚಿಕ್ಕಪ್ಪ, ಚಿಕ್ಕಮ್ಮ ಇಸ್ತ್ರಿ ಮಾಡುತ್ತಿದ್ದರು. ಎಲ್ಲರಂತೆ ಇವರು ಬೇರೆಯವರು ಇಸ್ತ್ರಿಗೆ ಕೊಟ್ಟ ಬಟ್ಟೆಯನ್ನು ಧರಿಸಿ ಹೋಗುತ್ತಿದ್ದರು. ಒಂದು ದಿನ ರೆಡ್ಡಿ ಹುಡುಗ ನನ್ನ ಬಟ್ಟೆ ಧರಿಸಿದ್ದಿಯಾ ಎಂದು ಶಾಲೆಯಲ್ಲಿ ಅವಮಾನ ಮಾಡಿದ ಪ್ರಸಂಗ ಇವರಿಗೆ ಅಸಲಿರೂಪ ತೋರಿಸಿದ್ದ ಈ ವ್ಯವಸ್ಥೆಯ ಪ್ರವಾಹದಲ್ಲಿ ಅಸ್ತ ವ್ಯಸ್ಥಗೊಂಡ ಎಳೆಮನಸ್ಸು ತನ್ನಅಂತರಂಗದೊಳಗಿಂದ ಕವಿತೆಗಳು ಟಿಸಿಲೊಡೆದವು. ಈ ಬಾಲ್ಯದ ಅನುಭವಗಳ ಹಿನ್ನಲೆಯಲ್ಲಿ ಬಹಳಷ್ಟು ಕವನಗಳನ್ನು ಬರೆದಿರುವರು ಹಾಗೆ "ಪೊಟ್ರೋಮ್ಯಾಕ್ಸ್ ಹೊತ್ತ ಕೊರವರು" ಶ್ರೀಸಾಮಾನ್ಯರು, ಹಗಲು ವೇಷಗಾರರು.

ಇಲ್ಲಿ ರಾಯಚೂರಿನ ಲಡಕಾಸಿಗಲ್ಲಿಗಳಲ್ಲಿ ಗಟಾರಗಳಲ್ಲಿ ಬದುಕನ್ನು ಸೋಸುತ್ತಿರುವ ಬದುಕಪ್ಪನಲ್ಲಿ ಅಮಾಯಕ ಕೊರವ ಹೆಗಂಸರನ್ನು ವಸ್ತುವಿನಂತೆ ಮಾರಾಟ ಮಾಡುವ ಮಾನವೀಯವ್ಯವಸ್ಥೆ ಇಲ್ಲದೆ. ಒತ್ತೆಯಿಡುವ ಅನಿಷ್ಠ ಪದ್ದತಿಗಳಲ್ಲಿ ಇವರಬದುಕಿಗೆ ಮಾನವೀಯತೆಗೆ ಕೂಗಿಕೊಳ್ಳುತ್ತೇನೆ. ಇದನ್ನು ನೋಡಿದಾಗ ಮಾನವೀಯತೆ ನಡು ಬೀದಿಯಲ್ಲಿ ಮೌನವಾಗಿ ಮಗಿರುವುದು ಜೊತೆಗೆ ಅಪಮೌಲ್ಯಕೊಳ್ಳಗಾಗಿರುವುದನ್ನು ಕಾಣಬಹುದು ಅದಕ್ಕಾಗಿ ಇವರ ಉಳಿವಿಗಾಗ ಬರಹ ಬರೆದಿರುವುದು ಅಂಶ ತಿಳಿಯಬಹುದು.

ಹಾಗೆಯೇ ಆಂದ್ರದ ದಿಗಂಬರ ವಿಪ್ಲವ ಸಾಹಿತ್ಯ ಹಾಗು ದಲಿತ ಸಂವೇದನೆಗೆ ಮಿಡಿಯುವುದು ಸಾಹಿತ್ಯವನ್ನು ಜಗತ್ತಿಗೆ ಸಾರುವುದು, ನಗ್ನ ಸತ್ಯವನ್ನು ಕೂಗಿ ಹೇಳುವುದರ

ಜೊತೆಗೆ ಒಬ್ಬ ಬೇಟೆಗಾರ ಒಬ್ಬ ಬೇಟೆಯ ಜೊತೆ ಇರುತ್ತಾನೆ. ಬೇಟೆಗಾರನ ಜೊತೆಯಲ್ಲಿ ಅದೇರೀತಿ ವರ್ಗ ವರ್ಣ ಜಾತಿ ಧರ್ಮ ರಾಷ್ಟ್ರೀಯತೆ ಲಿಂಗಭೇದಗಳಿಂದಾಗಿ ವೃದ್ದಿಸತ್ತಿರುವ ಶೋಷಣೆ ಮತ್ತು ಮಾನವ ಜಾತಿಯನ್ನು ವಿನಾಶದತ್ತ ನೂಕುತ್ತಿರವ ಯುದ್ಧದ ಕರಾಳ ಛಾಯೆಗಳು ಆವರಿಸಿದಂತೆ ಮನಗಳಲ್ಲಿ ಪಾಪ ವಿಚಾರ ಧಾರೆಯಲ್ಲಿ ಅಂಧಕಾರ ರಸ್ತೆಯ ಮೇಲೆ ನೆತ್ತರು ಇವುಗಳನ್ನು ತೊಡೆದು ಹಾಕಲು ತಾವು ಅನ್ಯಾಯದೊಡನೆ ಹೋರಾಟ ಮಾಡಲು ಉತ್ತಮ ಮಾನವೀಯ ವ್ಯವಸ್ಥೆಗಾಗಿ ಬರವಣಿಗೆ ಕೈಗೊಂಡಿರುವುದು ಈ ಲೇಖನದಲ್ಲಿ ಕಾಣಬಹುದು. ಬಂಡಾಯದ ಕವಿಯಾದ ಇವರು ಹೆಚ್ಚು ಶೋಷೀತ ಪರ, ದಲಿತ ಪರ, ಆಲೋಚನೆಗಳಿಂದ ತಾವು ಬರಹ ಬರೆದಿರುವ ಅಂಶ ಈ ಲೇಖನದಲ್ಲಿ ಕಾಣುತ್ತೇವೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ವಾಸ್ತವ ಬದುಕಿನ ಅಂಶಗಳು ಜನರಿಗೆ ತಿಳಿಸಲು
* ಬಾಲ್ಯದ ಅನುಭವಗಳ ಹಿನ್ನೆಲೆಯಲ್ಲಿ ಕವಿತೆ ಟೀಸಿಲೊಡೆದಿರುವುದು
* ಸತ್ಯವನ್ನು ಜಗತ್ತಿಗೆ ಸಾರುವುದಕ್ಕಾಗಿ
* ಶೋಷಣೆ ಮತ್ತು ಅನ್ಯಾಯದ ಹೋರಾಟಕ್ಕಾಗಿ
* ಮಾನವೀಯ ವ್ಯವಸ್ಥೆಯ ನಿರ್ಮಾಣಕ್ಕಾಗಿ

# ನನ್ನೊಳಗೆ ಜೋಗಿ ಪ್ರಜ್ಞೆಯಾಗಿರುವ

**ಎಸ್.ಜಿ. ಸಿದ್ದರಾಮಯ್ಯ**

ಕನ್ನಡ ಪ್ರಾಧ್ಯಪಕರಾದ ಇವರ ಉತ್ತಮ ಕವಿ ಹಾಗೂ ವಾಗ್ಮಿ ಅನೇಕ ಕವಿಗೋಷ್ಠಿಗಳಲ್ಲಿ ಭಾಗವಹಿಸಿ ಕವಿತೆಗಳನ್ನು ವಾಚಿಸಿದ್ದಾರೆ. ಇವರು ಕವನ ಓದುವ ದಾಟಿ ವಿಶಿಷ್ಟವಾದದ್ದು ಎಲ್ಲೀಗ್ ಬಂತು ಸಂಗಯ್ಯ ಕಾನಕಾನ ಸುತ್ತಿಸುತ್ತಿ ಎಂಬ ಇವರ ಒಂದು ಕವನ ಗಮನ ಸೆಳೆಯುವುದನ್ನು ಜಾನಪದ ಸಾಹಿತ್ಯದಲ್ಲಿ ಜಿ.ಎಸ್.ಲಿಂಗಯ್ಯ ಆಸಕ್ತಿ ತೋರಿರುವರು ಯಾವ ಪಂಥಕ್ಕೂ ಸೇರದ ಕವಿ.

ಇವರು ತಾವು ಬಿ.ಎ ಓದುತ್ತಿದ್ದಾಗ ಪದ್ಯ ಬರೆವ ಗೀಳು ಹಚ್ಚಿಕೊಂಡದ್ದು ಪ್ರಮುಖವಾಗಿ ಕುವೆಂಪು ಅವರ ನಾಟಕ ಕವನಗಳನ್ನು ಹಾಗೂ ನೇಗಿಲಯೋಗಿ ಕವನ ತುಂಬಾ ಇಷ್ಟಪಟ್ಟರು ಏಕೆಂದರೆ ರೈತನ ಕುರಿತಾದ ಕವನ ಅದು ಇವರು ತಾವು ಹಳ್ಳಿಯ ರೈತಾಪಿವರ್ಗದಿಂದ ಬಂದಿದ್ದರಿಂದ ಓದಿನ ಮೂಲಕ ಕುವೆಂಪು ಪ್ರಭಾವ ಬೀರಿದರು. ಇಲ್ಲಿ ನೇಗಿಲಯೋಗಿ ಬೇಸಾಯದ ಕಸುಬನ್ನು ತಪ್ಪಸಿಗೆ ಹೋಲಿಸಿ ಬೇಸಾಯಗಾರರನ್ನು ಯೋಗಿ ಅಂತ ಕರೆದಿರೊದು ಅಭಿಮಾನ ಮೂಡಿಸುವಂತಿತ್ತು. ಹೀಗೆ ತಾವು ಒಬ್ಬ ಕುವೆಂಪುತರ ಕವಿಯಾಗಬೇಕು ಅನ್ನೊ ಆಸೆ ಅವರನ್ನ ಬರವಣಿಗೆ ಹಚ್ಚಿತ್ತು ಹೆಗೆಂದರೆ ಬಾಲ್ಯದ ತೂಮಕೂರಿನ ಕಾಳಿದಾಸ ಹಾಸ್ಟೆಲಿನಲ್ಲಿ ಇದ್ದಾಗ ರಸ್ತೆಯ ಬದಿ ಒಬ್ಬಳು ಹೆಂಗಸು ತಟ್ಟಿ ತುಂಬ ಹೂವಿಟ್ಟುಕೊಂಡು ಹೂಬೇಕೆನಮ್ಮ ಹೂವ," ಈ ಕೂಗಿನ ಸಾಲುಗಳು ಇವರಿಗೆ ಕೋಗಿಲೆ ಪದ್ಯ ಬರೆಯಲು ಸ್ಪೂರ್ತಿ. ಹೀಗೆ ಇವರು ಬಾಲ್ಯದ ಅನುಭವ ಬರವಣಿಗೆಗೆ ಪೂರಕ ಅಂಶ ಕಾಣುತ್ತೇವೆ.

ಸೂರ್ಯ ಹುಟ್ಟೊದನ್ನು ನೋಡಿ ಸೂರ್ಯೋದಯ ಪದ್ಯ ಬರೆದದ್ದು ಹೀಗೆ ತಮ್ಮ ಬಾಲ್ಯವನ್ನು ಕುರಿತು ಅವುಗಳ ಘಟನೆಗಳೊಂದಿಗೆ ತಮ್ಮ ಸಾಹಿತ್ಯಕೃತಿ ಸಾಗಿರುವುದು ಇಲ್ಲಿ ಕಂಡುಬರುತ್ತದೆ ಹೀಗೆ ಸಾಹಿತ್ಯ ಅನ್ನುವಂತಹದ್ದು ಅದೊಂದು ಅನಭೂತಿ ಹೇಳಲಾರದಂತಹದ್ದು ಕೇವಲ ಅನುಭವಿಸಬೇಕು.

ಇವರು ಬರೆಯವ ಕಾಲಕ್ಕೆ ಸಾಹಿತ್ಯ ವಾತಾವರಣ ಹೇಗಿತ್ತೇಂದರೆ ನವೋದಯದ ಬಗ್ಗೆ ಕಟು ತಿರಸ್ಕಾರ, ಪ್ರಗತಿಶೀಲರ ಬಗ್ಗೆ ಅಸಡ್ಡೆ, ನವ್ಯರ ಬಗ್ಗೆ ವಿಜೃಂಬಣೆ ನವ್ಯ ಅಂದರೆ ಸಾಕು ಮಾತಡೋದು, ಹೀಗಾಗಿ ನವ್ಯದ ಆರಾದಕರಾಗಿ ಕಂಡರೂ ಮಡಿಕೇರಿಗೆ ಮೇಸ್ಟ್ರಾಗಿ ಹೋದ ಮೇಲೂ ೧೯೭೭ರ ನಂತರ ಮತ್ತೆ ಪದ್ಯದ ಗೀಳು ಹಚ್ಚಿಕೊಂಡರು ಹಾಗೇಯೇ ಮಡಿಕೇರಿಯಲ್ಲಿದ್ದಾಗ ಇವರಿಗೆ ಒಂದು ಕನಸಿನ ಪ್ರಸಂಗದ ಕಾರಣ ಕೇಡುಲೇಸಿನಾ ಗಡಿಯಾಚೆ ನಿಂತವನು ಕವನ ಬರೆದರು. ಇಲ್ಲಿ ತಮ್ಮ ಹಳ್ಳಿಯ ಭಾಷೆ, ಆನಂದ ಎಲ್ಲ

ಅನುಭವ ವಿವರಗಳು ಮೈತುಂಬಿ ಕೊಂಡು ಜೀವನತೆಳೆದು ಆಯಾಸ ವಿಲ್ಲದೆ ಬರವಣಿಗೆ ಬರೆದರು ನಂತರ ಇವರ ಬದುಕಿನ ಪ್ರೀತಿ ಬೆಳೆಯಲು ಕಾರಣ ನನ್ನೊಳಗೆ ಕೂಡಿವರಿದ ಜೋಗಿ ಪ್ರಜ್ಞೆ ಎನ್ನುತ್ತಾರೆ ಇಲ್ಲಿ ಜೋಗಿ ಇವರ ಅಪ್ಪ ತಾವೇ ಹೇಳುವಂತೆ ನನ್ನಪ್ಪ ಎಷ್ಟು ಸಿಟ್ಟಿನವರೋ ಅಷ್ಟೇ ಅಂತಃಕರಣ ತುಂಬಿದ ಹೆಂಗರಳಿನ ಜೀವ ಇತರರೂ ಅಸೂಯ ಪಡುವಷ್ಟು ಮುತುವರ್ಜಿಯಿಂದ ದುಡಿಯುತ್ತಿದ್ದ ಚೇತನ ಹಠಮಾರಿಗೂ ಕೂಡ ದಾನಮಾಡುತ್ತಿದ್ದ ಕಷ್ಟದಲ್ಲಿದ್ದವರಿಗೆ ಪ್ರೀತಿಚುಂಬಕ ಹೀಗೆ ಏನ್ನೆಲ್ಲ ವೈರುಧ್ಯಗಳ ಅನುಭವವಾಗಿ ನನ್ನೊಳಗಿರುವ ನನ್ನಪ್ಪ. ನನ್ನ ಜೋಗಿ ಪ್ರಜ್ಞೆ ನನ್ನ ಕವನಗಳ ಜೀವದಾತುವಾಗಿ ಆ ಪ್ರಜ್ಞೆ ಬೆಳೆದು ಬಂದದ್ದೆ ಇವರ ಕಾವ್ಯದ ವಿಶಿಷ್ಟತೆ. ಏಕೆಂದರೆ ಆ ಎಲ್ಲ ಗುಣಗಳನ್ನು ಕಂಡು ಅನುಭವಿಸಿದ್ದರಿಂದ ಕಾವ್ಯದಲ್ಲಿ ವಿಶಿಷ್ಟತೆ ಕಾಣಲು ಸಾಧ್ಯವಾಗುತ್ತದೆ. ಅಪ್ಪನ ಸಾವು ಇವರನ್ನು ಭಾದೆಯಾಗಿ ಕಾಡಿ ಚಿಂತನೆಗೆ ಹಚ್ಚಿ ಹುಡುಕಾಟದ ಹಾದಿಯಲ್ಲಿ ಅಪ್ಪನ ಹೆಜ್ಜೆ ಗುರುತುಗಳನ್ನು ಹುಡುಕುತ್ತಾ ಅಂದರೆ ಬರೆಯುತ್ತಾ ಬರೆಯುತ್ತಾ ಸಾಹಿತ್ಯ ರಚಿಸಿದರು.

ಈ ಲೇಖನದಲ್ಲಿ ತಮ್ಮ ಬಾಲ್ಯದ ನೆನಪುಗಳೊಂದಿಗೆ ತಾವು ಬರೆದ ಕಾವ್ಯದ ಚರ್ಚೆ ಹಾಗೂ ಶಬ್ಬದೊಳಗಡೆ ನಿಶ್ಯಬ್ಧವನ್ನು ಜೀವನದ ಅನುಭವಗಳನ್ನು ಕಟ್ಟಿಕೊಡುವ ಒಂದು ಪ್ರಯತ್ನದ ಹಾದಿ ಕಾವ್ಯ ಪ್ರಪಂಚವನ್ನು ಮೈಗೂಡಿಸಿಕೊಂಡು ಆ ಮೂಲಕ ತಮ್ಮನ್ನು ತಾವೂ ಕಂಡು ಕೊಳ್ಳುವ ಉಪಾಯ ಅಂದರೆ ಬರೆಯುವುದರ ಮುಖಾಂತರ ತನ್ನೊಳಗಿನಾಳಕ್ಕೆ ಬೀಜದಲ್ಲಿ ವೃಕ್ಷ ಕಾಣುವಂತೆ ಜೊಗಿ ಪ್ರಜ್ಞೆಯನ್ನು ಅಪ್ಪನ ಮೂಲಕ ಬರವಣಿಗೆ ಮುಂದುವರಿಸಿರುವುದು ಕಾಣಬಹುದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಕುವೆಂಪು ಅವರ ನೇಗಿಲಯೋಗಿ ಕವನದ ಪ್ರಭಾವ
* ಕಾಳಿದಾಸ ಹಾಸ್ಟೆಲ್‌ನಲ್ಲಿದ್ದಾಗಿನ ಪ್ರಸಂಗ
* ಮಡಿಕೇರಿಯಲ್ಲಿನ ಕನಸಿನ ಪ್ರಸಂಗ
* ಹಳ್ಳಿಯ ಭಾಷೆ, ಆ ನೆಲದ ಅನುಭವಗಳು
* ಜೋಗಿ ಪ್ರಜ್ಞೆಯ ಅಪ್ಪನ ಮೂಲಕ

# ವಿವಾದ ಸೃಷ್ಟಿಯಾಗಿ ಬರೆಯುವುದಿಲ್ಲ

**ಫಕೀರ್‌ಮಹಮದ್ ಕಟ್ಪಾಡಿ**

ವೃತ್ತಿಯಲ್ಲಿ ಬ್ಯಾಂಕ್ ನೌಕರರಾದರೂ ಪ್ರವೃತ್ತಿಯಲ್ಲಿ ಹೊಸ ಆಲೋಚನೆಗಳನ್ನು ಮೈಗೂಡಿಸಿಕೊಂಡು ಬಂಡಾಯ ಮನೋಧರ್ಮವುಳ್ಳ ಲೇಖಕರಾಗಿದ್ದಾರೆ. ಸಾಮಾಜಿಕ, ಸಾಂಸ್ಕೃತಿಕ ನೆಲೆಗಳ ಹಿನ್ನೆಲೆಯಲ್ಲಿ ಆ ಪ್ರದೇಶದಲ್ಲಿರುವ ಮುಸ್ಲಿಂ ಬದುಕನ್ನು ವೈರುಧ್ಯ ಹಾಗೂ ಮೂಲಭೂತವಾದಿ ಮನಸ್ಸುಗಳನ್ನು ಕಥೆ, ಕಾದಂಬರಿಯಲ್ಲಿ ಅನಾವರಣ ಮಾಡಿದ್ದಾರೆ.

ಇವರಿಗೆ ಬಾಲ್ಯದ ಪರಿಸರ, ಅನುಭವ, ಆಸಕ್ತಿ, ಬದುಕಿನಲ್ಲಿ ಎದುರಾದ ಹಲವು ಒತ್ತಡಗಳು ಬರೆಯುವುದಕ್ಕಾಗಿ ಪ್ರಮುಖ ಪಾತ್ರ ವಹಿಸಿರುವುದು ಹಾಗೂ ಇವರು ವಿದ್ಯಾರ್ಥಿ ಜೀವನದಲ್ಲಿ ಬಿ.ಪಿ. ಕಾಳೆ, ಎನ್. ನರಸಿಂಹಯ್ಯ, ಶೇಷಗಿರಿರಾವ್ ಇವರ ಪತ್ತೇದಾರಿ ಕಾದಂಬರಿಗಳನ್ನು ಓದಿ ಆಸಕ್ತಿ ಮೂಡಿಸಿಕೊಂಡಿದ್ದರು ಹಾಗೂ ತ.ರಾ.ಸು., ಅನಕೃ, ಕೃಷ್ಣಮೂರ್ತಿ ಪುರಾಣಿಕ, ತ್ರಿವೇಣಿ ಇವರ ಕಾದಂಬರಿಗಳನ್ನು ಓದುವ ಮೂಲಕ ಮತ್ತು ಯು.ಆರ್. ಅನಂತಮೂರ್ತಿ, ಕಾರಂತ ಕಾದಂಬರಿಗಳು ತೇಜಸ್ವಿ, ದೇವನೂರು, ಲಂಕೇಶ್, ಕೃಷ್ಣಮೂರ್ತಿ ಆಲನಹಳ್ಳಿ, ಇತರ ಕೃತಿಗಳು ಮುಖ್ಯವಾಗಿ ಪ್ರಭಾವ ಬೀರಿವೆ.

ಈ ಲೇಖನದಲ್ಲಿ ಬಾಲ್ಯದ ಅನುಭವಗಳು, ಪರಿಸರ ಹಾಗೂ ಪೇಟೆಯ ಪ್ರಭಾವ ಕಥೆಗಳ ಹಿನ್ನೆಲೆ ಕೆಲವೊಂದು ಗಾಢವಾಗಿ ಕಲುಕಿದ ಸಂಗತಿಗಳು ಕಾಣಬಹುದು. ಊರು ಗದ್ದೆಗಳಲ್ಲಿ ಕೆಲಸ ಮಾಡುವ ಕೂಲಿಯಾಳುಗಳು, ಬೀದಿರ ಮಳೆಯಲ್ಲಿ ಬಿದ್ದ ಕಾಳುಗಳನ್ನು ಬೇಯಿಸಿದ ಅನ್ನ, ಗೆಣಸು, ಹಲಸಿನ ಬೀಜದ, ಹುಣಸೆಬೀಜಗಳನ್ನು ಬೇಯಿಸಿ, ಸುಟ್ಟು ತಿಂದು ಹಸಿವೆಯನ್ನು ತಣಿಸಿಕೊಳ್ಳುವ ಜನಗಳು" ಹಾಗೂ ತಾಯಿಯ ಪಾರಮಾರ್ಥಕ ಮೌಲ್ಯಗಳ ಉದಾತ್ತತೆ, ಉಪದೇಶ ಇವುಗಳು ಇವರನ್ನು ಪರೋಕ್ಷವಾಗಿ ಕಥೆಯನ್ನು ಬರೆಯಲು ರೂಪಿಸುವ ಹಾಗೆ ತೋರಿವೆ.

ಇವರ ಕಥೆಗಳಲ್ಲಿ ಬಡತನವೇ ಹೆಚ್ಚು ಕಂಡುಬರುವುದರಿಂದ ಇವರ ಬದುಕಿನ ಹಿನ್ನೆಲೆ ತೆರೆದಿಡುವುದು ಅವಶ್ಯಕ ಸಂಗತಿ. ಹಾಗಾಗಿ ಇವರು ವಾಲ್ಯದ ಅನುಭವಗಳು ಬರೆಯಲು ಸ್ಫೂರ್ತಿದಾಯಕವಾದವು.

ಪರಿಸರ ಎಂದರೆ ಸುತ್ತಮುತ್ತಲಿನ ವಾತಾವರಣ ತಾವು ವಾಸ ಮಾಡುತ್ತಿರುವ ಪರಿಸರ ಎಂದರ್ಥ. ಇಲ್ಲಿ ಇವರು ಮುಸ್ಲಿಂನಾಗಿದ್ದರು ಹಿಂದುಗಳ ಮಿಲನದೊಂದಿಗೆ ಮುಸ್ಲಿಂ ಬದುಕನ್ನು ಇಡೀಯಾಗಿ ಅನುಭವಿಸುತ್ತಾ ಹಿಂದೂ ಬದುಕನ್ನು ತಿಳಿದುಕೊಳ್ಳುವ ಅವಕಾಶ

ದೊರೆತಿರುವುದು ಕಾಣಬಹುದು. ಆ ಹಿನ್ನೆಲೆಯಲ್ಲಿ ಇಡೀಯಾಗಿ ಹಳ್ಳಿಯ ವಾತಾವರ ಸವಿದಿದ್ದರಿಂದ ಕಥೆಗಳಲ್ಲಿ ಹಳ್ಳಿಯ ವಾತಾವರಣ ಅಲ್ಲಿಯ ಜೀವನ ಕ್ರಮಗಳ ಪ್ರಭಾವ ಬೀರಿ ಬರೆಯಲು ಪೂರಕವಾಗಿರುವುದು ಕಾಣುತ್ತೇವೆ. ಹಳ್ಳಿಯ ವಾತಾವರಣದಲ್ಲಿ ಜನರ ಮಧ್ಯ ಇರುವ ಸ್ನೇಹ, ವಿಶ್ವಾಸವನ್ನು ಕಂಡ ಇವರು, ಪೇಟೆಯಲ್ಲಾದ ಅನುಭವ ಬೇರೆಯೇ. ಅಲ್ಲಿ ಜಾತಿ ಬಗ್ಗೆ ಚರ್ಚಿಸಿರುವುದು ಕಾಣುತ್ತೇವೆ. ಒಂದು ಬಾರಿ ಶಾಲೆ ರಜೆಯ ಅನುಭವವನ್ನು ಬರೆದು ತರಲು ಹೇಳಿದಾಗ ಪ್ರಬಂಧ ರೂಪದಲ್ಲಿ ನಾನೊಬ್ಬನೆ ಬರೆದು ತಂದದ್ದನ್ನು ಅಧ್ಯಾಪಕರು ಓದಿದಾಗ ಆಗ ಬರೆಯಲು ಒಂದಿಷ್ಟು ಸ್ಫೂರ್ತಿ ಹಾಗೂ ಬರವಣಿಗೆಗೆ ಒಂದು ತರಹದ ಅವ್ಯಕಭಯ ಆವರಿಸಿರುವುದು ಕಾಣಬಹುದು. ನಂತರ ಅದರಿಂದ ಹೊರಬಂದು 'ನಿಕಾಹ್' ಎನ್ನುವ ಕಥೆ ಸುಧಾ ಪತ್ರಿಕೆಯಲ್ಲಿ ಪ್ರಕಟವಾಯಿತು. ಮುಸ್ಲಿಂ ವಸ್ತುವಿನ ಕಥೆಯುಳ್ಳ ಇದು ಬದುಕಿನ ಪರಿಚಯ ಮಾಡಿಕೊಡುತ್ತದೆ. ಕಾರಣ ಅವರು ಬೆಳೆದ ಬಾಲ್ಯ, ಪರಿಸರ, ಪೇಟೆ ಪ್ರಭಾವ ಇವೆಲ್ಲವು ಎನ್ನಬಹುದು.

ಒಬ್ಬ ಬರಹಗಾರನಾದವನಿಗೆ ಸಾಹಿತ್ಯ ಸೃಷ್ಟಿಯೇ ಜೀವನದ ಪ್ರಧಾನ ಉದ್ದೇಶವೂ ಆಗಿರುವುದಿಲ್ಲ. ಎಲ್ಲ ಸಾಮಾನ್ಯ ಮನುಷ್ಯನಂತೆಯೇ ಬರಹಗಾರ ಕೂಡ ಸಮಾಜ ಜೀವಿಯಾಗಿರುತ್ತಾನೆ. ಸಾಹಿತ್ಯವನ್ನು ಸಮಾಜದ ಸಂಸ್ಕೃತಿಯ ಉತ್ತಮ ಫಲವೆಂದು ನಾವು ಗುರುತಿಸುತ್ತೇವೆ. ಸಮಾಜವು ಧರ್ಮದ ಆಧಾರದ ಮೇಲೆ ಮುಖ್ಯವಾಗಿ ಗುರುತಿಸಲ್ಪಡುತ್ತದೆ. ಧರ್ಮಾಧಾರಿತ ಸಮಾಜವು ತಾನು ಪ್ರತಿನಿಧಿಸುವ ನಂಬಿಕೆಗಳು ಹಳೆಯ ಪರಂಪರೆಗಳು, ಸಂಪ್ರದಾಯಗಳು, ಮೌಲ್ಯಗಳು ಶ್ರೇಷ್ಠ ಮತ್ತು ಪ್ರಶ್ನಾತೀತವೆಂಬ ಹುಮ್ಮು ಬೆಳೆಸಿಕೊಂಡಿರುವುದು ಕಾಣುತ್ತೇವೆ.

ಹಾಗಾಗಿ ವಿವಾದ ಸೃಷ್ಟಿಸುವ ಸಲುವಾಗಿ ಬರೆಯುವುದಿಲ್ಲ. ಪ್ರಜ್ಞಾಪೂರ್ವಕವಾಗಿ ಎಚ್ಚರ ವಹಿಸಿಕೊಂಡು ಹೇಳಬೇಕಾದುದನ್ನು ಯಾವ ಮುಲಾಜಿಲ್ಲದೆ ವ್ಯಕ್ತಪಡಿಸಿರುವುದು ಈ ಲೇಖನದ ಓದಿನ ಮೂಲಕ ತಿಳಿಯಬಹುದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಅನಂತಮೂರ್ತಿ, ಕಾರಂತ, ತೇಜಸ್ವಿ, ದೇವನೂರು, ಲಂಕೇಶ್ ಇವರ ಕಾದಂಬರಿಗಳು ಮುಖ್ಯವಾಗಿ ಬರೆಯಲು ಪ್ರಭಾವ
* ಪರಿಸರ ಮತ್ತು ಪೇಟೆಯ ಗಾಢವಾದ ಪ್ರಭಾವ
* ತಾಯಿಯ ಪಾರಮಾರ್ಥಿಕ ಮೌಲ್ಯಗಳ ಉದಾತ್ತತೆ, ಉಪದೇಶ
* ಹಿಂದು, ಮುಸ್ಲಿಂ ಮಿಲನದೊಂದಿಗಿನ ಬದುಕು ಹಾಗೂ ಹಳ್ಳಿಯ ವಾತಾವರಣ

# ನಾನೇಕೆ ಬರೆಯುತ್ತೇನೆ

**ಕೆ. ಸತ್ಯನಾರಾಯಣ**

ಇವರು ಬರಹವನ್ನು ಗಂಭೀರವಾಗಿ ತೆಗೆದುಕೊಂಡಿದ್ದು ಮೂವತ್ತು ವರ್ಷದಾಟಿದ ಮೇಲೆ ಅನ್ನುತ್ತಾರೆ. ಅಂದರೆ ಅಲ್ಲಿಯ ತನಕ ಮುಖ್ಯ ಆಸಕ್ತಿ ಓದುವುದೇ ರೂಢಿಸಿಕೊಂಡಿದ್ದರು. ಹಾಗಾಗಿ ಬರಹಗಾರನಾದವನಿಗೆ ಓದುವುದು ಲೋಕಜ್ಞಾನ ತಿಳುವಳಿಕೆ ಅತ್ಯವಶ್ಯಕವಾದದ್ದು. ಆ ಮೂಲಕ ಮೊದಲಿಗೆ ಸಂಗ್ರಹಿಸಿ ನಂತರ ಅದನ್ನು ಹೊರ ಹಾಕುವುದು ಹಾಗೆಯೇ ಇವರೂ ಸಹ ಗ್ರಾಮೀಣ, ಪಟ್ಟಣ ಹಿನ್ನೆಲೆಯ ಯಾವ ರೀತಿ ಅನುಕೂಲ ಸವಲುತ್ತುಗಳು ಇಲ್ಲದ ಕೆಳ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬ. ಓದಿನಿಂದ ಪಡೆದ ಅನುಭವದ ಬೆಳಕಿನಲ್ಲಿ ಜೀವನದ ಕೊರತೆಗಳು ಕಂಡು ಬಾಲ್ಯದ ಒಂಟಿತನ ಹಿಂಜರಿಕೆ, ಕೀಳರಿಮೆ, ಭಯ ಗೆಲ್ಲಲು ಅವರು ಓದುತ್ತಾ ಇದರಿಂದ ಒಂದು ವಿಶಿಷ್ಟ ಅನುಭವ. ಒಂದು ರೀತಿಯ ಆತ್ಮವಿಶ್ವಾಸ ಪಡೆದು ಬರವಣಿಗೆಯನ್ನು ಕರಗತ ಮಾಡಿಕೊಂಡ ಅಂಶ ಕಾಣುತ್ತೇವೆ.

ಅಂತರಂಗದ ಬದುಕಿನ ಬಗ್ಗೆ ಪ್ರೀತಿ, ವಿಶ್ವಾಸವಿರುವ ಸಾಕಷ್ಟು ಮಿತ್ರರು ಸಿಕ್ಕಿರುವುದು ಬರವಣಿಗೆಯಿಂದ ಎನ್ನುತ್ತಾರೆ. ಅಂದರೆ ಇವರ ಬರವಣಿಗೆಯಲ್ಲಿ ಅಂತಹ ಶಕ್ತಿಯನ್ನು ಮೈಗೂಡಿಸಿಕೊಂಡು ಅವರ ಪ್ರೀತಿ, ವಿಶ್ವಾಸ ಉಳಿಸಿಕೊಳ್ಳಲು ಬರೆಯುತ್ತಿರಬೇಕು ಒಳ್ಳೆಯ ಬರವಣಿಗೆ ಮಾತ್ರ ಇಂತಹ ಮಿತ್ರಋಣವನ್ನು ತಿಳಿಸಬಹುದು. ಇಂತಹ ಒಂದು ಅಂಶ ಪ್ರೇರಣೆಯಿಂದಲೇ ಲೇಖಕನಾದೆ ಎನ್ನುವಲ್ಲಿ ಗೆಳೆಯರ ಪಾತ್ರ ಸಹೃದಯರ ಪಾತ್ರದ ಮಹತ್ವತೆ ಇಲ್ಲಿ ಕಾಣಬಹುದು

ಸಮಾಧಾನದಿಂದ ಬರೆಯುವುದರ ಹಿಂದೆ, ಓದುಗರಿಂದ ಮತ್ತು ಬೇರೆ ಬೇರೆ ಮಾರ್ಗಗಳಿಗೆ ಸೇರಿದ ನವೋದಯ, ನವ್ಯ, ಪ್ರಗತಿಶೀಲ, ದಲಿತ ಚಳುವಳಿಯ ಬರಹಗಾರರಿಂದ ಪಡೆದ ಧೋರಣೆಗಳು ಈ ಅಂಶಗಳು ಇಲ್ಲಿ ಕಾಣುತ್ತೇವೆ. ಜೊತೆಗೆ ಬರಹಗಾರನಾಗುವುದೆಂದರೆ ಪ್ರಬುದ್ಧನಾಗುವುದು ಮಾತ್ರವಲ್ಲ ನಮ್ಮ ಸೃಜನಶೀಲತೆ ಬಗ್ಗೆ ವಿನಯವನ್ನು ರೂಢಿಸಿಕೊಳ್ಳುವುದು ಕೂಡ ಆಗಿರುವುದು ಆಗಿದೆ. ಅಂತವುಗಳನ್ನು ರೂಢಿಸಿಕೊಳ್ಳುವ ಅಂಶವು ಇಲ್ಲಿ ಪ್ರಸ್ತಾಪವಿದೆ. ಸೃಜನಶೀಲತೆ ಇದ್ದಾಗ ಬರವಣಿಗೆಯಲ್ಲಿ ಹೊಸತನ ಕಾಣಲು ಸಾಧ್ಯವಾಗುತ್ತದೆ.

ಬಾಲ್ಯದಲ್ಲಿ ಓದಿದ ಕಥೆ, ಕಾದಂಬರಿಗಳು ಬ್ರಾಹ್ಮಣ ಸಮಾಜದ ಚಿತ್ರಣವೇ ತುಂಬಿರುತ್ತಿದ್ದುದರಿಂದ ಇತರರನ್ನು ನೋಡುವ, ಗಮನಿಸುವ ಕ್ರಿಯೆ ಹಾಗೂ ಹೈಸ್ಕೂಲ್ ದಿನಗಳ ಪುಸ್ತಕ ಒಂದರಲ್ಲಿ ಬರೆದ ದಿನಚರಿ ಮುಂದೆ ಬರಹಗಾರನಾಗಿ ರೂಪಿಸಿವೆ. ಇವರ ಕಥಾಪ್ರಪಂಚ ವೈವಿಧ್ಯತೆಯನ್ನು ಹೆಚ್ಚಿದೆಯೆಂದು ಹೇಳುವಲ್ಲಿನ ಅಂಶ ಪರಿಗಣಿಸಿದಾಗ ಇವರು

ಪಟ್ಟಣ, ಹಳ್ಳಿ, ಕೆಳಜಾತಿ, ಮೇಲ್‌ಜಾತಿ, ಧರ್ಮ, ಮಠಮಾನ್ಯ, ಸಂಪ್ರದಾಯ, ಮಡಿಮೈಲಿಗೆ ಒಟ್ಟಿಗಿನ ಜೀವನ ಅನುಭವ ನೋಡಿದ್ದರಿಂದ, ಅವರು ಕಥೆಗಳಲ್ಲಿ ಈ ರೀತಿ ವೈವಿಧ್ಯತೆಯನ್ನು ಕಾಣಬಹುದು. ಹೈಸ್ಕೂಲ್, ಕಾಲೇಜುಗಳಲ್ಲಿ ಸಿಕ್ಕಿದ್ದ ಸಾಹಿತ್ಯದ ಮೇಷ್ಟ್ರುಗಳ ವಿಶಿಷ್ಟ ವ್ಯಕ್ತಿತ್ವ ಅಂದರೆ ಇಲ್ಲಿ ಅವರು ಹೇಳುವ ಪಾಠ, ನಡೆದುಕೊಳ್ಳುವ ರೀತಿ ನೀತಿಗಳು ಹಾಗೂ ಎನ್.ಆರ್. ನಾಗರಾಜಯ್ಯ, ಶ್ರೀನಿವಾಸನ್, ಎಂ. ವಿಜಯಚಂದ್ರ, ಕುವೆಂಪು, ಬೇಂದ್ರೆ ಬಿಟ್ಟರೆ ಎಲ್ಲಾ ಗಣ್ಯ ಸಾಹಿತಿಗಳು ಹಾಗು ಮದ್ದೂರಿನಲ್ಲಿ ನಡೆದ ದಿನದ ಜಿಲ್ಲಾ ಸಾಹಿತ್ಯ ಸಮ್ಮೇಳನದ ಭಾಷಣಗಳು ಪ್ರಭಾವ ಬೀರಿರುವುದು ಕಂಡು ಬರುತ್ತದೆ. ಬರೆಯಲು ಹಾಗೆಯೇ ಎ.ಎನ್. ಮೂರ್ತಿರಾವ್ ಅವರ ಪ್ರಬಂಧಗಳ ಓದು ಇವರಿಗೆ "ನಮ್ಮ ಪ್ರೀತಿಯ ಕ್ರಿಕೆಟ್" ಪ್ರಬಂಧ ಸಂಕಲನ ತಯಾರು ಮಾಡುವುದು ಪ್ರಭಾವ ಬೀರಿರುವುದು ಕಾಣುತ್ತೇವೆ.[೬]

ಬಾಲ್ಯದ ಜಗತ್ತು ಮದುವೆ, ಕಾಮ, ರೋಗರುಜಿನಗಳಿಂದಾಚೆಗೆ ಏನನ್ನೂ ಬಯಸದವರ ಜಗತ್ತು ಧರ್ಮವನ್ನು, ದೇವರನ್ನು ಯಾಂತ್ರಿಕವಾಗಿ, ಜಡವಾಗಿ ಪರಿಭಾವಿಸಿದವರ ಜಗತ್ತು ಇದರಲ್ಲಿರುವುದನ್ನು ಕುರಿತು ಬರೆಯುವುದರ ಮೂಲಕ ಈ ಜಗತ್ತಿನಲ್ಲಿ ಅವರಿಗೆ ದೊರಕದೆ ಹೋದ ಪ್ರೀತಿ, ಮಾನ್ಯತೆಗಳನ್ನು ದೊರಕಿಸಲು ಬರಹಕ್ಕೆ ಕೈ ಹಾಕಿದ್ದಾರೆ. ಇವರಿಗಾಗಿ ಮತ್ತೆ ಜಗತ್ತನ್ನು ಪುನರ್ ನಿರ್ಮಿಸಬೇಕು ಹೀಗೆ ನಿರ್ಮಿಸುತ್ತಿರುವ ಜಗತ್ತಿನಲ್ಲಿ ಪ್ರೀತಿ, ಅಂತರಂಗ ಮುಖ್ಯವಾಗಿದೆ. ಹೀಗೆ ಅಂತಃಕರಣದ ತವಕದ ಜೊತೆ ಗೆಳೆಯನಾಗಲು ಹಂಬಲಿಸುವುದು ಈ ಲೇಖನದಲ್ಲಿ ಕಂಡುಬರುತ್ತದೆ.

ಪ್ರತಿಯೊಂದು ಬರವಣಿಗೆಯು ಬದುಕಿಗೆ ಒಂದು ಚೌಕಟ್ಟನ್ನು ನಿರ್ಮಿಸುವಂತೆ ಅದು ಎಷ್ಟು ಚಿಕ್ಕದಿದ್ದರೂ ಎಷ್ಟೇ ಮಿತಿಯುಳ್ಳದ್ದಾದರೂ ವ್ಯಕ್ತಿಯ ದೃಷ್ಟಿಯಿಂದ ಅನನ್ಯತೆಯಿಂದ ಕೂಡಿರುತ್ತವೆ. ಇವುಗಳು ಬದುಕಿಗೆ ಘನತೆಯನ್ನು ತಂದು ಕೊಡುವಂತಹದ್ದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಓದಿನ ಹವ್ಯಾಸ ಬೆಳೆಸಿಕೊಂಡಿದ್ದು
* ಪ್ರೀತಿ, ವಿಶ್ವಾಸ ಉಳಿಸಿಕೊಳ್ಳಲು ಮಿತ್ರಋಣ ಸಂಪಾದಿಸಲು
* ಸಾಹಿತ್ಯ ಚಳುವಳಿಯ ಬರಹಗಾರರ ಪ್ರೇರಣೆ
* ಹೈಸ್ಕೂಲ್ ದಿನಗಳ ಪುಸ್ತಕ ಒಂದರಲ್ಲಿ ಬರೆದ ದಿನಚರಿ
* ಮದ್ದೂರಿನಲ್ಲಿ ನಡೆದ ಜಿಲ್ಲಾ ಸಾಹಿತ್ಯ ಸಮ್ಮೇಳನ
* ಮೂರ್ತಿರಾವ್ ಅವರ ಪ್ರಬಂಧಗಳ ಓದು

# ನಾನೇಕೆ ಬರೆಯುತ್ತೇನೆ

ಶ್ರೀ ಎಚ್. ಎಸ್.ಶಿವಪ್ರಕಾಶ

ನಮ್ಮ ನಡುವಿನ ಅನುಭಾವಿ ಕವಿ, ಪುರಾಣ, ಆದ್ಯಾತ್ಮ, ತತ್ವಶಾಸ್ತ್ರ, ಇವುಗಳಲ್ಲಿ ಅಪಾರ ಆಸಕ್ತಿಯಿಟ್ಟುಕೊಂಡಿರುವ ಶಿವಪ್ರಕಾಶರವರು, ಪುರಾಣ, ಇತಿಹಾಸ ಜನಪದಗಳಿಂದ ವಸ್ತುಗಳನ್ನು ಆರಿಸಿಕೊಂಡು ಸಾರ್ವಕಾಲಿಕ ಮೌಲ್ಯಗಳನ್ನು ಎಲ್ಲೆ ಹಿಡಿಯಬಲ್ಲ ಕೃತಿ ರಚಿಸುವುದರಜೊತೆಗೆ ತಾತ್ವಿಕ ಆಲೋಚನೆಗಳನ್ನು ಒಳಗೊಂಡ ಕನ್ನಡದ ವಿಶಿಷ್ಠ ಬರಹಗಾರರಾಗಿದ್ದಾರೆ.

ಇವರು ಸಹ ಬಾಲ್ಯದ ಜೀವನದಲ್ಲಿ ಅನುಭವಿಸಿದ ನೆನಪುಗಳು ಕಂಡ ಪ್ರಸಂಗದೊಂದಿಗೆ ಕವಿತೆ ರಚಿಸಲು ಪ್ರೇರಣೆ ನೀಡಿರುವ ಅಂಶ ಗುರುತಿಸಬಹುದು. ತಾವೇ ಹೇಳಿದಂತೆ ತಾವು ಸ್ಕೂಲ್ ಹುಡುಗನಿದ್ದಾಗ ನೆಂಟರ ಮನೆಯಲ್ಲಿನ ಸಂಭ್ರಮದ, ಗೃಹಪ್ರವೇಶದ ಸನ್ನಿವೇಶ ಸಂಥಂರ್ಭಗಳನ್ನು ಕಳೆದು ಹೋಗುತ್ತಿದ್ದ ಅನುಭವವನ್ನು ಕವಿತೆ ಸಾಲುಗಳಲ್ಲಿ ಬರೆದಿಟ್ಟಿರುವುದನ್ನು ನೋಡಿದಾಗ ತಾವು ಬರವಣಿಗೆಯ ಮೂಲಕ ಅದನ್ನು ಸದಾ ನೆನಪಿನ ಬುತ್ತಿಯಲ್ಲಿ ಇಟ್ಟುಕೊಳ್ಳಬೇಕು. ಹಾಗೂ ಬರವಣಿಗೆಗೆ ಆ ಶಕ್ತಿಯಿದೆ. ಎಂದು ಗ್ರಹಿಸಿ ಕವಿತೆ ಬರೆದಿರಬೇಕು.

ಇದೇ ಹಾದಿಯಲ್ಲಿ ಹೊರಟ ಶಿವಪ್ರಕಾಶ್ ಅವರು ಮದುವೆ ಮನೆಯ ಗಡದ್ದಾಗಿ ಊಟ ಮಾಡಿ ಬಿಸಾಡಿದ ಎಂಜಲು ಎಲೆಯನ್ನು ನಾಯಿಗಳು, ತಿರುಕರು, ಬಡಿದಾಡಿ ತಿನ್ನುವುದನ್ನು ಕುರಿತು ತೊಟ್ಟಿಯಾದೆ. ಎಂಜಲೆಲೆಯಾದೆ, ತಿರುಕರಾದೆ, ನಾಯಿಗಳಾದೆ ಎನ್ನುವ ಕವಿತೆಯ ಗ್ರಹಿಕೆಯು ಇವರ ಮನಸ್ಸಿನಲ್ಲಿ ಅಡಗಿರುವ ಸಾಹಿತ್ಯಕಲೆ ಗುರುತಿಸಬಹುದು. ಅಂದರೆ ಪ್ರತಿಯೊಂದು ಅಂಶವನ್ನು ಕಂಡು ಅನುಬವಿಸಿದ್ದರ ಕುರಿತು ಒಂದು ಸಿದ್ಧಿಯನ್ನು ಪಡೆದಿರುವುದು ಆ ಮೂಲಕ ಸಾಹಿತ್ಯ ರಚಿಸಿರುವುದು ಕಾಣುತ್ತೇವೆ.

ಈ ಲೇಖನದಲ್ಲಿ ಮದುವೆ, ಗೃಹಪ್ರವೇಶ, ಮೃತ್ಯು ವಿಧಿಗಳು ಮುಂತಾದ ಕೂಡುಬಾಳಿನ ಸಂಕೇತಗಳು ಇವರನ್ನು ಕೆಣಕಿ ಸರಣಿ ಸರಣಿಯಾಗಿ ಬರವಣಿಗೆಗೆ ಸ್ಪೂರ್ತಿದಾಯಕವಾಗಿರುವುದರ ಜೊತೆಗೆ, ಸಾಮುದಾಯಿಕ ಬದುಕಿನ ಮುಗ್ಧ ಐಕ್ಯತೆಯನ್ನು ದಾಟಿದ, ವೈಯಕ್ತಿಕ ಪ್ರಜ್ಞೆಯ ತಲ್ಲಣಗಳನ್ನು ದಾಟಿದ ಕಾವ್ಯ ಇವರ ಆದರ್ಶತೆಯನ್ನು ತೋರಿಸುತ್ತದೆ. ಅದೇ ರೀತಿ ಬಸವ, ಅಕ್ಕ, ಅಲ್ಲಮ, ತುಕಾರಾಮ, ಕಬೀರರ ಕಾವ್ಯದ ಹಾಗೆ ತಮ್ಮ ಬರವಣಿಗೆ ಮೈಗೂಡಿಸಿಕೊಳ್ಳಬೇಕು. ಏಕೆಂದರೆ ಸಾಹಿತ್ಯದಲ್ಲಿ ಬದಲಾವಣೆ, ಬಂಡಾಯ, ಕ್ರಾಂತಿಗಳು ಅವಶ್ಯಕವಾಗಿರುವುದರಿಂದ ಆ ಮೂಲಕ ಹೊಸ ಕ್ರಾಂತಿಯ ಕಹಳೆ ಊದಲು ಸಹಾಯಕವಾಗುತ್ತದೆ. ಆಚರಣೆ, ಪ್ರಭುತ್ವ ಮನೆ, ಜಾತಿ, ವರ್ಗ ಇವುಗಳನ್ನು ಕುರಿತು ಬರೆಯುವುದರಲ್ಲಿ ಮಗ್ನವಾಗಿಸುವ ಕಾರ್ಯ ನಡೆಯುತ್ತದೆ ಎಂಬ ತಪ್ಪು ಕಲ್ಪನೆ ಹೋಗಲಾಡಿಸಲು, ಕನ್ನಡ ಸಾಹಿತ್ಯದ ಪರಿಸ್ಥಿತಿಯನ್ನು

ನೋಡಿ ಬಂಡಾಯ ಕ್ರಾಂತಿಗಳು ಅವಶ್ಯಕವಾಗಿವೆ ಎಂಬ ಅಂಶ ತಿಳಿಯಬಹುದು. ಹಾಗೂ ಜಡಗಟ್ಟುವಿಕೆ ಸ್ಥಾವರ ಸ್ಥಿತಿ, ಸೃಜನಶೀಲತೆಗಿಂತಲೂ ವೇಗವಿಮರ್ಶೆ, ಸಿದ್ಧಾಂತಗಳಿಗೆ ತಗಲುತ್ತದೆ. ಆದ್ದರಿಂದಲೆ ಜೀವಂತಿಕೆ ಮತ್ತು ಅರಿವಿಂದ ಕೂಡಿದ ಸೃಜನಶೀಲ ಬರವಣಿಗೆ, ವಿಮರ್ಶೆಗಳು, ಸಿದ್ಧಾಂತಗಳು ಹಾಕುವ ಕಟ್ಟುಗಳನ್ನು ಮುರಿಯುತ್ತಿರುತ್ತವೆ. ಈ ಹಿನ್ನೆಲೆಯಲ್ಲಿ ಬರೆದ ಸನ್ನಿವೇಶ, ಅದರ ಪರಿಣಾಮ, ಅದರಿಂದ ಸಿಕ್ಕಿದ ಕೀರ್ತಿ, ಬೈಗುಳ ಇವೆಲ್ಲವೂ ಇವರನ್ನು ಮೂರ್ತಿಯಾಗಿಸಿ ತಮ್ಮನ್ನು ತಾವು ಕಂಡುಕೊಳ್ಳಲು ಬರೆಯುತ್ತೇನೆ ಎಂಬ ಅಂಶ ವ್ಯಕ್ತಪಡಿಸಿರುವುದು ಕಾಣಬಹುದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ನೆಂಟರ ಮನೆಯಲ್ಲಿನ ಸಂಭ್ರಮದ ಗೃಹಪ್ರವೇಶ
* ಬಸವ, ಅಕ್ಕ, ಅಲ್ಲಮ, ತುಕಾರಾಮ, ಕಬೀರರ ಕಾವ್ಯಗಳು
* ಸೃಜನಶೀಲ ವಿಮರ್ಶೆಗಳು, ಸಿದ್ಧಾಂತಗಳು
* ಜಾತಿ, ವರ್ಗ, ವರ್ಣ ಹೋಗಲಾಡಿಸಲು
* ತಮ್ಮನ್ನು ತಾವು ಕಂಡುಕೊಳ್ಳಲು
* ಬರವಣಿಗೆಯಿಂದ ಸಿಕ್ಕಿದ ಕೀರ್ತಿ, ಬೈಗುಳ

# ಪತ್ರಕರ್ತನ ಸಾಹಿತ್ಯ ಕೃತ್ಯ

**ನಾಗೇಶ್ ಹೆಗಡೆ**

ಇವರು ಪತ್ರಕರ್ತರು ವಿಜ್ಞಾನ ಬರಹಗಾರರು. ಪರಿಸರವಾದಿಗಳು ಪ್ರಜಾವಾಣಿ ದಿನಪ್ರತ್ರಿಕೆಯಲ್ಲಿ ಸಂಪಾದಕರಾಗಿ ಕಾರ್ಯ ಮಾಡುತ್ತಿದ್ದಾರೆ. ಇವರು ವೈಜ್ಞಾನಿಕ ಲೇಖನಗಳನ್ನು ಹೆಚ್ಚು ಬರೆದಿದ್ದಾರೆ. "ಇರುವುದೊಂದೆ ಭೂಮಿ", " ಗಗನ ಸಖಿಯರ ಸೆರಗು ಹಿಡಿದು"' ನಮ್ಮೊಳಗಿನ ಬ್ರಹ್ಮಾಂಡ, "ಕಾಪ್ಲೊಸ್ಲಗಿತ್ತಿ", "ಮಂಗಳದಲ್ಲಿ ಜೀವಲೋಕ", ಮತ್ತು ಪ್ರತಿದಿನ ಪರಿಸರ ದಿನ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ.

ಪತ್ರಕರ್ತರಾದ ಇವರು ಸಾಹಿತ್ಯವನ್ನು ಯಾವ ರೀತಿ ಮೈಗೂಡಿಸಿಕೊಂಡರು. ಎಂಬುದನ್ನು ತಮ್ಮ ಬಾಲ್ಯದ ನೆನಪುಗಳನ್ನು ಮೆಲಕು ಹಾಕುತ್ತಾ ಅತ್ಯಂತ ಸ್ವಾರಸ್ಯಕರವಾಗಿ ಹೇಳಿರುವುದು ಕಂಡು ಬರುತ್ತದೆ. ಹೇಗೆಂದರೆ ಪಿ.ಯು.ಸಿ. ಓದುತ್ತಿದ್ದಾಗ "ಭಾರತವನ್ನು ನೋಡು" ಜಗತ್ತನ್ನು ನೋಡು: ಎಂಬರ್ಥದ ಮುದ್ರಿತ ಚೀಟಿ ಅದೇ ಇವರ ದಿಕ್ಕನ್ನು ಬದಲಾಯಿಸಿದ್ದು ಜಗತ್ತನ್ನು ನೋಡುವುದಕ್ಕಾಗಿ ಭೂವಿಜ್ಞಾನ ವಿಷಯ ಆಯ್ದುಕೊಂಡು ಧಾರಾವಾಡದಲ್ಲಿ ಎಮ್.ಎಸ್..ಸಿ ಪದವಿ ಅವಕಾಶ ಸಿಕ್ಕರೂ ದೂರದ ಖರಗ್ ಪುರ IIT ಗೆ ಅರ್ಜಿಹಾಕಿ ಪ್ರವೇಶಗಿಟ್ಟಿಸಿ' ಬ್ರಿಟನ್, ಅಮೇರಿಕಾ, ಸೈನಿಕಾಲ್, ದೇಶಗಳನ್ನು ಸುತ್ತಿ ಬಂದಿರುವುದು ಕಾಣುತ್ತೆವೆ. ಹೀಗೆ ದೇಶ ನೋಡಬೆಕು. ಕೋಶ ಓದಬೇಕು ಇದರಿಂದ ಜ್ಞಾನ ವೃದ್ಧಿಸುತ್ತದೆ. ಎಂಬ ಮಾತಿಗೆ ಹೆಗಡೆಯವರು ವಿವಿಧ ದೇಶಗಳನ್ನು ಸುತ್ತಿದ್ದರಿಂದ ಮತ್ತು ತಂತ್ರಜ್ಞಾನದಲ್ಲಿನ ಅಪಾರವಾದ ತಿಳುವಳಿಕೆಯೊಂದಿಗೆ ಪರಿಸರ ವಿಜ್ಞಾನದಲ್ಲಿ ಸ್ನಾತಕೊತ್ತರ ಪದವಿ ಪಡೆದು ಎರಡರ ಸಮಿಶ್ರಣದಿಂದ ಕನ್ನಡದ ಬರವಣಿಗೆಯನ್ನು ಹಿಡಿದು ಪತ್ರಕರ್ತರಾಗಿ ಪತ್ರಿಕೊದ್ಯಮದಲ್ಲಿ ಕೆಲಸಮಾಡುತ್ತಾ ಎಲ್ಲರ ಜನಮನ ಸೆಳೆದಿದ್ದಾರೆ. ಪ್ರಕಾಶಕರ ಬೇಡಿಕೆಗೆ ಇವರು ಮನಸ್ಸು ಕೊಡದೆ ಪತ್ರಿಕೆಗೆ ದುಡಿಯುತ್ತಿದ್ದದು ಹೆಮ್ಮೆಯ ಸಂಗತಿ ಏಕೆಂದರೆ ಇಂದು ಸಂಜೆ ಬರೆದ ಲೇಖನ ಬೆಳಗ್ಗೆ ಮುದ್ರಿತಕ್ಷರಗಳ ರೂಪದಲ್ಲಿ ೩ ಲಕ್ಷ ಜನರನ್ನು ತಲುಪಿರುತ್ತವೆ. ಬಿಸಲೇರುವ ಮೊದಲೇ ಕೆಲವಾದರೂ ಪ್ರತಿಕ್ರಿಯಿಸುತ್ತಾರೆ. ಪ್ರಕಾಶನಾದ ವಿಷಯ ಹಾಗಲ್ಲ. ಆರುತಿಂಗಳು ವರ್ಷಮಾಡಿ ನಂತರ ಅರ್ಧನಾವೇ ಖರೀದಿಸಿ ಪ್ರಕಟವಾದ ಒಂದೂವರೆ ತಿಂಗಳಲ್ಲಿ ಸೆಕೆಂಡ್ ಹ್ಯಾಂಡ್ ಬುಕ್ ಸ್ಟಾಲ್‌ಗಳಲ್ಲಿ ಚೀಪಾಗಿಸಿಗ್ತು ಕೊಂಡ್ಕೊಂಡೆ. ಸಾರ್! ಎನ್ನುತ್ತಾ ಮುಗ್ಧ ನಗೆಯೊಂದಿಗೆ ಹಿರಿಯರು ನನ್ನನ್ನು ಮೆಚ್ಚಿಸಲೆಂದು ಬಂದಾಗ ಮುಖಕ್ಕೆ ರಪ್ಪ್ ಎಂದು ಐಸಕ್ರಿಮ್ ಬಟ್ಟಲನ್ನು ರಾಚಿದಂತಾಗುತ್ತದೆ. ಹಾಗಾಗಿ ತಾವು ಪತ್ರಿಕೆಗಾಗಿ ದುಡಿಯುವುದು ಒಳಿತು ಎನ್ನುವ ಅಂಶ ಗೋಚರಿಸುತ್ತದೆ ಜೊತೆಗೆ ಹೈಸ್ಕೂಲ್ ಗುರುಗಳು ಮಕ್ಕಳಿಂದ ನಿಬಂಧ ಬರೆಯಿಸಿ ಅತ್ಯುತ್ತಮವಾದುದನ್ನು ಇಡೀ ಕ್ಲಾಸಿಗೆ ಓದಿ ಹೇಳಿದ್ದರು.

ಅದರಲ್ಲಿ ಇವರ ನಿಬಂಧವೇ ಆಗಿರುತ್ತಿತ್ತು. ಹಾಗಾಗಿ ಇದಕ್ಕೆ ಕಾರಣ ನರಸಿಂಹಯ್ಯ, ಅನಕೃ, ತರಾಸು, ಬಸವರಾಜ ಕಟ್ಟಿಮನಿ ಕಾದಂಬರಿಗಳು ಬೇಂದ್ರೆ ಕವನಗಳು ಓದಿಕೊಂಡಿದ್ದರು. ಹೀಗೆ ಬಾಲ್ಯದಲ್ಲಿಯೇ ಅನೇಕ ಕಾದಂಬರಿ ಕವನ ಓದುವ ಗೀಳು ಹಚ್ಚಿಕೊಂಡು ತಾವು ಅಂತಹ ಬರಹಗಾರರ ಪಟ್ಟಿಗೆ ಸೇರ್ಪಡೆಯಾಗುವ ಉದ್ದೇಶದಿಂದ ಬರವಣಿಗೆಗೆ ಧುಮುಕಿರುವುದು ಕಾಣುತ್ತೇವೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಇಲ್ಲಿ ಪತ್ರಕರ್ತರಾದ ಇವರು ತಮ್ಮ ಸಾಹಿತ್ಯ ಕೆಲಸ ಯಾವರೀತಿ ಸಾಗಿಸಿಕೊಂಡು ಬಂದರು ಎಂಬುದನ್ನು ಚರ್ಚಿಸುತ್ತಾ, ಜೊತೆಗೆ ಹೈಸ್ಕೂಲ್‌ನಲ್ಲಿ ಬರೆಸುತ್ತಿದ್ದ ನಿಬಂಧನೆಗಳು ಇವರ ಸಾಹಿತ್ಯ ಹುಚ್ಚಿಗೆ ಪ್ರೇರಣಾತ್ಮಕ ಅಂಶ ಗೋಚರಿಸುತ್ತದೆ.
* ಹಾಗೂ ವಿಜ್ಞಾನದ ಸ್ನಾತಕೋತ್ತರ ಪದವಿ ಹಾಗೂ ಪತ್ರಿಕೋದ್ಯಮದ ಕೆಲಸದ ಅನುಭವಗಳ ಸಂಮಿಶ್ರಣ

## ಅಡಿ ಟಿಪ್ಪಣಿ

೧. ಡಾ. ಅಮರೇಶ ನುಗಡೋಣಿ (ಸಂ) ನಾನೇಕೆ ಬರೆಯುತ್ತೇನೆ ಪುಟ–೭೩

೨. ಅದೇ ಪುಟ–೭೫

೩. ಅದೇ ಪುಟ–೮೭

೪. ಅದೇ ಪುಟ–೮೯

೫. ಅದೇ ಪುಟ–೮೮

೬. ಅದೇ ಪುಟ–೮೬

೭. ಜಿ.ಎಸ್. ಸಿದ್ಧರಾಮಯ್ಯ (ಸಂ) ಸಾಲು ದೀಪಗಳು ಪುಟ–೨೧೭

೮. ಅದೇ ಪುಟ–೧೦೧

## ೫

೧. ಅರವಿಂದ ಮಾಲಗತ್ತಿ

೨. ಶ್ರೀಮತಿ ನೇಮಿಚಂದ್ರ

೩. ಬಸವರಾಜ ಕುಕ್ಕರಹಳ್ಳಿ

೪. ಎಸ್. ಮಂಜುನಾಥ

ಇಲ್ಲಿ ೬೦ರ ದಶಕದಿಂದಿಚೇಗೆ ಬರೆಯುವ ಲೇಖಕರನ್ನು ಅವರ ಸಾಹಿತ್ಯವನ್ನು ಚರ್ಚೆಗೆ ಗುರಿಪಡಿಸಲಾಗಿದೆ. ಅಂದರೆ ಅವರ ಸಾಹಿತ್ಯಕ್ಕೆ ಆದ ಪ್ರೇರಣೆ, ಧೋರಣೆ ಮತ್ತು ರೂಪಿಸಿಕೊಂಡಿರುವ ತಾತ್ವಿಕತೆಯನ್ನು ತಮ್ಮ "ನಾನೇಕೆ ಬರೆಯುತ್ತೇನೆ" ಬರಹದಲ್ಲಿ ಸೂಚಿಸಿದ್ದಾರೆ. ಕವಿ, ಕಥೆಗಾರರಾಗಿ, ಸೂಕ್ಷ್ಮವಾದ ವಿಚಾರಗಳನ್ನು ಈ ಬರಹದಲ್ಲಿ ರೂಪಕದ ಮೂಲಕ ಕೂಡಾ ಹೇಳಲು ಪ್ರಯತ್ನಿಸಿದ್ದಾರೆ. ಈ ಬರಹಗಳಲ್ಲಿ ವ್ಯಕ್ತವಾದ ಸಾಹಿತ್ಯಿಕ ಚಿಂತನೆಯನ್ನು ಈ ಕೆಳಗೆ ವಿವರಿಸಲು ಪ್ರಯತ್ನಿಸಲಾಗಿದೆ.

# ಬರೆಹ ನನಗೆ ಜೀವ ಚೈತನ್ಯ ತುಂಬಿದೆ

**ಅರವಿಂದ ಮಾಲಗತ್ತಿ**

ಕಾದಂಬರಿಕಾರರು, ನಾಟಕಕಾರರು ವಿಮರ್ಶಕರು, ಅನುವಾದಕರಾಗಿ ಹಲವು ಕೃತಿಗಳನ್ನು ರಚಿಸಿ ಕಾವ್ಯದ ಮೂಲಕ ಸಾಹಿತ್ಯ ಲೋಕಕ್ಕೆ ಪರಿಚಿತರಾಗಿದ್ದಾರೆ. ತಾವು ಯಾಕೆ ಬರೆಯುತ್ತೀರಿ ಎಂಬ ಪ್ರಶ್ನೆಗೆ ಸುಖ ಸಂಕಟದ ನಡುವೆ ನಿಂತು ಪ್ರಜ್ಞಾಪೂರ್ವಕವಾಗಿಯೇ ಬರೆಯುತ್ತೇನೆಂಬ ವಿಶ್ವಾಸದೊಂದಿಗೆ ಕಾಗದ ಕಪ್ಪು ಮಾಡುತ್ತಿರುವೆ ಎನ್ನುತ್ತಾರೆ. ಯಾಕೆಂದರೆ ಬರಹವು ಯಾವಾಗಲು ಅನುಭವದ ಗಣಿ. ಅದು ಸಿಹಿಯೇ ಇರಲಿ, ಕಹಿಯೇ ಇರಲಿ ಅವರ ಒಟ್ಟು ಹೂರಣವೇ ಪ್ರಜ್ಞಾಪೂರ್ವಕವಾಗಿಯೇ ಹೊರ ಹಾಕಲಾಗಿರುತ್ತದೆ.

ಇವರಿಗೆ ತಮ್ಮ ಬರಹ ತಮಗೆ ಜೀವ, ಚೈತನ್ಯವನ್ನು ತುಂಬಿದೆ ಎನ್ನುತ್ತಾರೆ. ಆ ನಿಟ್ಟಿನಲ್ಲಿ ಇವರ ಬರವಣಿಗೆಯನ್ನು ಮೈಗೂಡಿಸಿಕೊಂಡು ತಮ್ಮ ಸುಖ, ದುಃಖಗಳನ್ನು ಹಾಗೂ ಸಮಾಜದಲ್ಲಿಯ ಕಷ್ಟ ಕಾರ್ಪಣ್ಯಗಳನ್ನು ವಾಸ್ತವದ ಅಂಶಗಳನ್ನು ಬರಹ ರೂಪದಲ್ಲಿ ಹೊರಹಾಕಿದ್ದಾರೆ. ಏಕೆಂದರೆ ಬರಹಗಾರನು ಯಾವಾಗಲೂ ಜನಪರ ಮತ್ತು ಪ್ರಗತಿಪರವಾಗಿರುತ್ತಾನೆ. ಸಾಹಿತ್ಯದ ಸಂಗಡ ಬದುಕುದೆಂದರೆ ಸಮಾಜದೊಂದಿಗೆ ಬದುಕುವುದೆಂದರ್ಥವಲ್ಲವೆ? ಸಾಹಿತ್ಯ ಕೇವಲ ಮನೋಲ್ಲಾಸಕ್ಕಲ್ಲ ಅಥವಾ ಯಾಂತ್ರಿಕ ಕ್ರಿಯೆಯೂ ಅಲ್ಲ. ಸಮಾಜದ ಅರಿವುಳ್ಳ ವ್ಯಕ್ತಿಗೆ ಬರಹ ಸಮಾಜಿಕ ಜವಾಬ್ದಾರಿ. ಬರಹದ ಬೇರು ಸಮಾಜದಾಳಕ್ಕೆ ಇಳಿದಾಗಲೇ ಅದಕ್ಕೆ ಜೀವಂತಿಕೆ. ಹೀಗೆ ಸಾಹಿತ್ಯ ಹಾಗೂ ಸಮಾಜದ ನಡುನದ ಸಂಬಧವನ್ನು ಕುರಿತು ಚರ್ಚಿಸಿದ್ದಾರೆ.

ಅನುಭವ ಮತ್ತು ಶಬ್ದ ಸಂಪತ್ತು ಬರಹಕ್ಕೆ ದೊಡ್ಡ ಶಕ್ತಿ. ಬರಿ ಅನುಭವವಿದ್ದರೆ ಸಾಲದು. ಶಬ್ದ ಸಂಪತ್ತು ಬೇಕು. ಅನುಭವವನ್ನು ವ್ಯಕ್ತಿನಿಷ್ಠ, ಸಮೂಹನಿಷ್ಠವೆಂದು ವರ್ಗೀಕರಿಸುವುದು ತುಂಬ ಸರಳ. ಈ ಹಿನ್ನೆಲೆಯಲ್ಲಿ ವ್ಯಷ್ಟಿಯ ಅನುಭವಗಲೇ ಸಮಷ್ಟಿಯತೆಗೆ ದಾರಿ ತೋರುತ್ತವೆ. ಹಾಗಾಗಿ ಇವುಗಳ ಮೂಲಕ ಬರಹಕ್ಕೆ ಚೈತನ್ಯ ತುಂಬಿರುವ ಅಂಶ ಗೋಚರಿಸುತ್ತದೆ.

**ಲೇಖನದಲ್ಲಿ ಕಂಡು ಬರುವ ಪ್ರಮುಖ ಅಂಶಗಳು**

- ಸುಖ ದುಃಖಗಳು ಬದುಕಿನ ವಾಸ್ತವದ ಅನುಭಗಳು
- ಬರಹಕ್ಕೂ ಸಮಾಜಕ್ಕೂ, ಬದುಕಿಗೂ ಇವರು ಜವಾಬ್ದಾರಿಯ ಕುರಿತ ಆಲೋಚನೆಗಳು
- ವಾಸ್ತವ ಬದುಕಿಗೂ ಸಾಹಿತ್ಯಕ್ಕೂ ಇರುವ ಸಂಬಂಧದ ಬಗ್ಗೆ ಚರ್ಚೆ
- ಬರಹದ ಮೂಲಕ ತಮ್ಮನ್ನು ಚೈತನ್ಯವಾಗಿಸಿಕೊಳ್ಳುವುದು

- ಬರಹಗಾರನ ಅಭಿವ್ಯಕ್ತಿಯ ಮಾರ್ಗಗಳು
- ವ್ಯಷ್ಟಿ ಮತ್ತು ಸಮಷ್ಟಿಯ ಅನುಭವಗಳು
- ಇವರಲ್ಲಿ ಅಡಗಿದ ಸ್ಥಿರ ಪ್ರಜ್ಞೆ

ಹೀಗೆ ಬರಹವನ್ನು ಈ ಅಂಶಗಳ ಮೂಲಕ ತಾವು ಹೊರಹಾಕಿದ್ದಾರೆ. ಈ ಅಂಶಗಳು ಅವರ ಬರವಣಿಗೆಗೆ ಸ್ಫೂರ್ತಿದಾಯಕವಾಗಿವೆ. ಹಾಗೂ ಚೈತನ್ಯವನ್ನು ತಂದುಕೊಟ್ಟಿವೆ.

# ನಾನೇಕೆ ಬರೆಯುತ್ತೇನೆ?

ಶ್ರೀಮತಿ ನೇಮಿಚಂದ್ರ

ಹಳ್ಳಿಯ ಹಿನ್ನೆಲೆಯಿಂದ ಬಂದ ಶ್ರೀಮತಿ ನೆಮಿಚಂದ್ರ ಇವರು ಬಡತನದಲ್ಲಿಯೇ ವಿದ್ಯಾಭ್ಯಾಸ ಮುಗಿಸಿದರೂ, ಬಟ್ಟೆ ಬರೆಗೆ ಹಣ ವ್ಯರ್ಥಮಾಡಬಾರದೆಂಬ ಉದ್ದೇಶದಿಂದ ಅಪ್ಪ ಮನೆಯ ತುಂಬಾ ಪುಸ್ತಕಗಳನ್ನು ಕೊಂಡು ತುಂಬಿದ್ದರು. ಹಾಗಾಗಿ ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ ಅವರ ಕವನಗಳನ್ನು ಕೇಳುತ್ತಾ ನಾನು ಬೆಳೆದೆ ಎನ್ನುತ್ತಾರೆ. ಹಾಗಾಗಿ ತಾವು ಮುಂದೆ ಅವುಗಳನ್ನು ಮೈಗೂಡಿಸಿಕೊಂಡು ಅವರು ಹಾಕಿಕೊಟ್ಟ ಮಾರ್ಗದರ್ಶನನದವರೆಗೆ ಇವರು ಇಂಜನಿಯರಿಂಗ್ ಪದವಿ, ಸಾಹಿತ್ಯದ ಗೀಳು, ಅವರನ್ನು ಬರೆಯುವ ಹಂತಕ್ಕೆ ತಂದಿರುವುದು ನೋಡಬಹುದು ಇವರ ಮೊದಲ ಕವಿತೆ.

ಸರಿತಾ<br>
ನೆಲದ ಹಸಿರು<br>
ಮುಗಿಲ ನೀಲ<br>
ದೂರದಲ್ಲೇಲ್ಲೋ<br>
ದಿಗಂತದ ಅಂಚಿನಲ್ಲಿ<br>
ದೀರ್ಘ ಚುಂಬನದಲ್ಲಿ

ಇವರಲ್ಲಿ ಸರಿತಾ ಏಕೆ ಬಂದಳು. ಸುರೇಶನೋ, ರಮೇಶನೋ, ಉಮೇಶನೋ ಆಗದೆ ಎಂದು ಅಚ್ಚರಿ ಪಡಬೇಕಿಲ್ಲ. ಉತ್ತರ ಸ್ಪಷ್ಟವಿದೆ. ಇಂಥಾ ಹೆಣ್ತನಕ್ಕೆ ಅಂಟಿಸಿದ ಆತಂಕಗಳು ಬಹುಶಃ ನಮ್ಮ ಲೇಖಕರನ್ನು ಕಾಡಿರಲಿಕ್ಕಿಲ್ಲ. ಇದೆ ಕಾರಣಕ್ಕಿರಬೇಕು ನಾವು ಸ್ತ್ರೀಯರು, ನಮ್ಮ ಅನುಭವಗಳನ್ನು ತೆಗೆದುಕೊಂಡದ್ದು ತೀರಾ ಕಡಿಮೆ. ಆಳಕ್ಕಿಳಿದು ನಮ್ಮ ನಿಜವಾದ ಅನಿಸಿಕೆಗಳನ್ನು ಮುಟ್ಟಲು ಬೆಚ್ಚಿದ್ದೇವೆ.

ಇವರು ಸ್ವತಂತ್ರ್ಯವಾಗಿ ಸಂಶೋಧನೆಗೆ ಕೈಗೊಂಡಾಗ ತಮ್ಮ ಭಾವನೆಗಳನ್ನು ಕಥಾಸಂಕಲನದಲ್ಲಿ ಕಥೆ ಬರೆಯುವುದರ ಮುಖಾಂತರ ತಮ್ಮ ಬರಹದ ತುಡಿತವನ್ನು ಹಂಚಿಕೊಂಡಿದ್ದಾರೆ. ಗೆಳತಿ ರಾಜಿ ಸಾವಿನ ನಂತರ ಇದನ್ನು ನೋಡಿದಾಗ ಅದರ ಸಾವೆ ಇವರ ಬರಹಕ್ಕೆ ಹಚ್ಚಿದ್ದು ಎನ್ನಬಹುದು. ಇದು ರಾಜಿಯ ಒಂದೇ ಸಾವಲ್ಲ. ಭಾರತದಲ್ಲಿಯ ಅವೇಷ್ಟೋ ಹೆಣ್ಣುಮಕ್ಕಳಿರುವ ನೋವು ತುಡಿತಗಳು ಹೇಳಿಕೊಳ್ಳಲಾರದಂತಹ ಕಷ್ಟಗಳು ಅವರನ್ನು ಇಂದಿಗೂ ಕಾಡುತ್ತವೆ.

ಹಾಗಾಗಿ ಅವರೆಲ್ಲರ ಪರವಾಗಿ ಬರಹಗಾರ್ತಿಯಾದ ಇವರು ಎಲ್ಲಾ ಬರಹಗಾರ್ತಿಯರಿಗೂ ಕಾಡಿದ ಹಾಗೆ ಇವರಿಗೂ ಸುತ್ತಮುತ್ತಲಿನ ಪ್ರಸಂಗಗಳು, ವಿಚಾರಗಳು ಕಂಡುಂಡ ಅನುಭವಗಳು ಇಲ್ಲಿ ಮಳೆಯಾದ್ದರಿಂದ ಅವಳ ಒಂದು ಜಗತ್ತಿನ ದೈಹಿಕ ಬಂಜೆತನದ ವಿಷಯ ಬರೆಯಲು ಪ್ರಚೋಧಿಸಿದೆ ಎನ್ನಬಹುದು. ಏಕೆಂದರೆ ಅಂತಹ ಸಂದರ್ಭಗಳು, ಸನ್ನಿವೇಶಗಳು ಇವರು ಕಣ್ಣಿಂದಲೇ ನೋಡಿದ್ದರಿಂದ ಬರೆಯಲು ಸಹಾಯಕವಾಗಿದೆ. ಹೀಗೆ ಬರೆಯುವುದರ ಮುಖಾಂತರ ಮಹಿಳಾ ಪರಂಪರೆಯನ್ನು ಪುನರ್ ಪರಿಚಯಿಸುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ.

ಹೀಗೆ ಕವಿತೆ, ಕಥೆ, ಮಹಿಳಾ ಅಧ್ಯಯನ ಪುಸ್ತಕಗಳು ಹಲವಾರು ಬರಹದ ಮೂಲಕ ಭಾವನೆಗಳನ್ನು ಹೊರಚೆಲ್ಲುವ ಅಂಶ ಈ ಲೇಖಿನ ಒಳಗೊಂಡಿದೆ.

ಇಲ್ಲಿ ತಾವು ಅನೇಕ ಪ್ರವಾಸ ಕೈಗೊಂಡಿರುವುದರಿಂದ ಹಾಗೂ ತಮ್ಮ ವೃತ್ತಿ ಕ್ಷೇತ್ರಕ್ಕಾಗಿ ಕೈಗೊಂಡ ಅನುಭವಗಳು, ಶತಮಾನಗಳ ಹಿಂದಿನ ಮಹಿಳಾ ವಿಜ್ಞಾನ ಬಹಳಷ್ಟು ತಾಣಗಳನ್ನು ಹುಡುಕಿ ಇಂಗ್ಲೆಂಡ್, ಯೂರೋಪ್, ಅಮೆರಿಕಾಗಳನ್ನು ಅಲೆದು ಪರ್ವಗಳನ್ನು, ಶಿಖರಗಳನ್ನು ಅಲೆದು ಇದರಲ್ಲಿರುವ ಅನುಭವ, ಅದ್ಭುತ ಅನುಭವಗಳನ್ನು ಹೊರಹಾಕಲು ಪ್ರವಾಸ ಸಾಹಿತ್ಯವಾಗಿ ಕಾರ್ಯನಿರ್ವಹಿಸಿರುವುದು ನೋಡಬಹುದು.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಹಳ್ಳಿಯ ಸರಳವಾದ ಬದುಕು
* ಕುವೆಂಪು, ಬೇಂದ್ರ, ಬಿ.ಎಂ.ಶ್ರೀ. ಅವರ ಕವನಗಳ ಓದು
* ಸಂಪ್ರದಾಯದ ಕಟ್ಟುಪಾಡುಗಳ ಸಡಿಲಿಕೆಗಾಗಿ
* ಗೆಳತಿಯಾದ ರಾಜಿಯ ಸಾವು
* ಮಹಿಳಾ ಪರಂಪರೆಯ ಪುನರ್ ರಚಿಸುವ ಪ್ರಯತ್ನ
* ಇತರ ದೇಶಗಳಲ್ಲಿ ಕಂಡಿರುವ ಅನುಭಗಳನ್ನು ವ್ಯಕ್ತಪಡಿಸಲು

# ನನ್ನ ಹಳ್ಳಿ ನನ್ನ ಬರವಣಿಗೆ ಸೆಲೆ

**ಬಸವರಾಜ ಕುಕ್ಕರಹಳ್ಳಿ**

ಇವರು ನೀವು ಯಾಕೆ ಬರೆಯುತ್ತೀರಿ ಎಂಬ ಪ್ರಶ್ನೆಗೆ ಉತ್ತರ ಕೊಡುತ್ತಾ, ನನ್ನ ಹಳ್ಳಿ, ನನ್ನ ಬರವಣಿಗೆಯ ಸೆಲೆ ಎನ್ನುತ್ತರೆ. ಹಾಗಾಗಿ, ಇವರೂ ಸಹ ೯೦ರ ದಶಕದ ಕಥೆಗಾರರಾದರು. ಬಾಲ್ಯದಲ್ಲಿಯ ಅನುಭವಗಳನ್ನು ಬಿಚ್ಚಿಟ್ಟಿದ್ದಾರೆ. ಹಾಗೂ ದಲಿತ ಸಂಘರ್ಷದ ಸಮಿತಿಯ ಮೂಲಕ ಅಂಬೇಡ್ಕರ್ ತಿಳುವಳಿಕೆಯನ್ನು ಮೈದುಂಬಿಕೊಳ್ಳುವುದು ಹಾಗೂ ಮಾರ್ಕ್ಸ್‌ವಾದ ಗ್ರಹಿಕೆಯ ಹಿನ್ನೆಲೆಯಲ್ಲಿ ಇವರ ಕಥೆಗಳು ಮೂಡಿಬಂದಿವೆ. ನಂತರ ರಾಮಲಿಂಗಮ್ ಎನ್ನುವ ಹಿರಿಯ ನಾಗರೀಕರು ಇವರಿಗೆ ಬರೆಯುವಂತೆ ಪ್ರೇರೆಪಿಸಿರುವುದು ಕಂಡುಬರುತ್ತದೆ. ಹೇಗೆಂದರೆ ಚೆಂದದ ಧ್ವನಿಯಿಲ್ಲದಿದ್ದರೂ ಹಾಡುತ್ತಾ, ನಾಚುತ್ತಾ, ಕುಣಿಯುವಂತೆ, ಬರೆಯುವಂತೆ, ಹೇಳುವ ಅಂಶ ಹಾಗೂ ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯ ದಬ್ಬಾಳಿಕೆ, ಅತ್ಯಾಚಾರ, ಅಸಮಾನತೆ, ಅಸ್ಪಶ್ಯತೆ ಆಚರಣೆ ಇವೆಲ್ಲವೂ ಸಾಹಿತ್ಯದ ಪರಭಾಷೆಗಳಾಗಬಲ್ಲವು ಎಂದು ಸಾರುತ್ತಾ ಆ ಪರಿಭಾಷೆಯ ಹಿನ್ನೆಲೆಯಲ್ಲಿ ದಲಿತಕೇರಿಯ ನುಡಿಗಟ್ಟುಗಳು ಅರಗಿಸಿಕೊಂಡಿದ್ದರಿಂದ ಆ ಮೂಲಕ ಸಾಹಿತ್ಯ ರಚಿಸುವುದು ಕಾಣಬಹುದು. ಹೀಗೆ ಒಂದು ಕಡೆ ಮಾರ್ಕ್ಸ್‌ವಾದ ಇನ್ನೊಂದು ಕಡೆ ದಲಿತ ಸಂಘರ್ಷ ಸಮಿತಿ ಇವು ಚೈತನ್ಯವನ್ನು ಚಿಗುರಿಸಿದವು ಹಾಗೂ ಮಾರ್ಕ್ಸ್‌ವಾದಿಯಾಗಿದ್ದ ರಾಮು ಮತ್ತು ಮಹದೇವ ಇವರಿಂದ ಮಾರ್ಗದರ್ಶನ ಪಡೆದಿರುವುದು ಕಂಡುಬರುತ್ತದೆ. ಗ್ರಾಂಥಿಕ ಭಾಷೆಯ ಕಡೆ ಗಮನವಿಲ್ಲದಿದ್ದರಿಂದ, ದಲಿತಕೇರಿಯ ನುಡಿಗಟ್ಟುಗಳು ಮೈಗೂಡಿಸಿಕೊಂಡಿದ್ದರಿಂದ, ಅದರಿಂದ ಅಪಹಾಸ್ಯಕ್ಕೆ ಒಳಗಾಗಿ ಅದರಿಂದ ಬಿಡುಗಡೆ ಹೊಂದಲು ಸಣ್ಣ ಸಣ್ಣ ಕಥೆಗಳು ಬರೆದು ಗೌರವಕ್ಕೆ ಸನ್ಮಾನಕ್ಕೆ ಪಾತ್ರರಾಗಿರುವ ಅಂಶ ಕಾಣುತ್ತೇವೆ.

ಇಂದು ನಾವು ಬದುಕುತ್ತಿರುವ ರೀತಿಗೆ ನಾವು ರೂಢಿಸಿಕೊಂಡಿರುವ ಅರ್ಥವ್ಯರ್ಥದ ಜೊತೆಗೆ ದುರಾಸೆಯ ಅಪೇಕ್ಷೆಗಳಿಂದಲೋ ಅಥವಾ ನಮ್ಮ ಬದುಕಿನ ಕ್ರಮಗಳನ್ನು ನನ್ನ ಕೈಯಿಂದ ತಪ್ಪಿಸಿ ತಾವೇ ನಿಯಂತ್ರಸಲು ಹುಟ್ಟಿರುವ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ ಅಂತರಾಷ್ಟ್ರೀಯ ಕೂಟಗಳು, ಮಾನವ ಬದುಕಿಗೆ ಅರ್ಥಕೊಡಬಹುದಾದ ಗಂಭೀರ ಭಾವನೆಗಳು ಭ್ರಷ್ಟಗೊಳಿಸುತ್ತಾ ನಮ್ಮ ಸಾಮಾಜಿಕ, ರಾಜಕೀಯ ಬದುಕಿನ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತಿವೆ. ಮನುಷ್ಯನ ಈ ಮೂಲಭೂತವಾದ ಭಾವನೆಗಳಿಗೆ ಧಕ್ಕೆಯಾಗದಂತೆ ನಶಿಸುವಂತೆ ಅವುಗಳನ್ನು ಕಾಪಾಡುವುದರಲ್ಲಿ ಸಾಹಿತ್ಯದ ಬಹುಮುಖ್ಯ ಪಾತ್ರವಿದೆ. ಹಾಗಾಗಿ ಬರವಣಿಗೆಯಿಂದ ಅಂಥದ್ದನ್ನು ಸಾಧಿಸುವ ಅಪೇಕ್ಷೆಯಿಂದ ಬರೆದಿದ್ದಾರೆ. ಹಾಗೂ ಹುಟ್ಟೂರಾದ ಹಳ್ಳಿ ಹಾಗೂ ಪರಿಸರ ಇವು ಬರವಣಿಗೆಯ ಸೆಲೆಗಳಾಗಿ ಬದುಕನ್ನೂ ಪ್ರೀತಿಸುವಂತೆ ಸಾಹಿತ್ಯವನ್ನು ಪ್ರೀತಿಸುವ ಅಂಶ ಗೋಚರಿಸುತ್ತದೆ.

ಈ ಲೇಖನದಲ್ಲಿ ಕಂಡು ಬರುವ ಪ್ರಮುಖ ಅಂಶಗಳು

* ದಲಿತ ಸಂಘರ್ಷದ ಸಮಿತಿ
* ಮಾರ್ಕ್ಸ್‌ವಾದದ ಗ್ರಹಿಕೆ
* ರಾಮಲಿಂಗಮ್ ಎನ್ನುವ ಹಿರಿಯ ನಾಗರೀಕರು
* ವರ್ಗ ಹೋರಾಟದ ತಿಳಿವಳಿಕೆ
* ಅಪಹಾಸ್ಯದಿಂದ ಬಿಡುಗಡೆ ಹೊಂದುವುದಕ್ಕಾಗಿ
* ದೇವನೂರು ಮಹದೇವ ಅವರ ಮಾರ್ಗದರ್ಶನ
* ಖಾಸಗೀಕರಣದ ದುಷ್ಪರಿಣಾಮ
* ಹಳ್ಳಿಯ ಘಟನೆಗಳು, ಪರಿಸರ, ಬರವಣಿಗೆಯ ಸೆಲೆಗಳು

# ಕವಿತೆ ಎಂಬುದು ಮನಸ್ಸಿನ ಹಾಜರಿ

**ಎಸ್. ಮಂಜುನಾಥ**

ಕವಿಯಾದ ಇವರು ಬಾಲ್ಯದಲ್ಲಿಯೇ ಇವರನ್ನು ಒಬ್ಬ ವಿಶೇಷ ವ್ಯಕ್ತಿ ಎನ್ನುವಂತೆ ಕಂಡ ಅಕ್ಕ ಹಾಗೂ ಅಕ್ಕನ ಮಾತಿನಿಂದ ಚಿತ್ರಕಾರನಾಗಲು ಪ್ರಯತ್ನಿಸಿದರು. ಕೊನೆಗೆ ಅದು ಕಾಪಿ ಮಾಡುವುದು ಎಂದು ತಿಳಿದು ಸ್ವಂತದ್ದಲ್ಲ ಎಂದು ಪದ್ಯದ ಗೀಳು ಹಚ್ಚಿಕೊಂಡರು. ಹೀಗೆ ಬರೆದ ಅನೇಕ ಪದ್ಯಗಳನ್ನು ತೆಗೆದುಕೊಂಡ ಹೋಗಿ ಅನಂತಮೂರ್ತಿಯವರನ್ನು ಭೇಟಿ ಮಾಡಿಕೊಟ್ಟರು. ಅವರು ಅವುಗಳನ್ನು ಓದಿ ನಿನಗೆ ಹೇಗೆ ಕಾಣುತ್ತದೋ ಹಾಗೆ ಬರಿ ಎಂದರು. ಈ ಪ್ರಥಮ ಪ್ರಯತ್ನ ಇವರ ಬರವಣಿಗೆಗೆ ದಾರಿ ಮಾಡಿಕೊಟ್ಟಿತು. ಹಾಗೆಯೇ ಒಂದು ಅರ್ಥಗರ್ಭಿತ ಬಿಂದುವಿನಿಂದ ಶುರುವಾಗಿ ಗೆರೆ ಮೂಡುತ್ತ ಚಿತ್ರವಾಗುವುದನ್ನು ಕಣ್ಣರಳಿಸಿ ನೋಡುವುದು ಇವರ ಕವಿತೆಯ ದೃಷ್ಟಿಕೋನ.

ಸ್ವಾನುಭವ, ನಿಷ್ಠೆ ಮತ್ತು ಅನುಭವ, ಪ್ರಾಮಾಣಿಕ ಇವು ಇವರ ಕವಿತೆ ಸ್ವರೂಪ. ಇದರರ್ಥ ಸ್ವಂತ ಅನುಭವದಿಂದ, ಪ್ರಾಮಾಣಿಕತೆಯಿಂದ ಬರೆಯುವುದು, ಬರೆದವನ ವ್ಯಕ್ತಿತ್ವ ಇಂಗಿ ಹೋದಷ್ಟು ಕವಿತೆಯ ಹಾಜರಿ ದಟ್ಟವಾಗುವುದು ಈ ಅರಿವು ಕವಿತೆಯ ಅಭಿವ್ಯಕ್ತಿಯನ್ನು ಸಹಜತೆಯ ಕಡೆಗೆ ನಡೆಸಿರುವುದು ಕಾಣುತ್ತೇವೆ. ಹಾಗೂ ಕುಮಾರವ್ಯಾಸ, ಬೇಂದ್ರೆ, ಪುತಿನ ಇವರ ಕರವನಗಳು ಓದಿನ ಬಲ ಬರಹಕ್ಕೆ ಸ್ಫೂರ್ತಿ ನೀಡಿರುವ ಅಂಶ ಕಾಣುತ್ತೇವೆ. ವಾಸ್ತವ ಬಗೆಗಿನ ಅಂಶಗಳನ್ನು ಕವಿತೆಯಲ್ಲಿ ಬರೆಯುವುದು. ಬದುಕು ಎಲ್ಲೆಡೆಯೂ, ಯಾವಾಗಲೂ ಸಂಪೂರ್ಣವಾದುದು ಎಂದು ನೆನಪು ಕನಸುಗಳಲ್ಲದೇ ಮನಸ್ಸನ್ನು ಕಣ್ಣೆದುರಿಗಿನ ಕ್ಷಣದಲ್ಲಿ ಕರಗಿಸುವುದು ಕವಿತೆಯ ಪ್ರಯತ್ನ ಎಂದು ಹೇಳಿದ್ದಾರೆ.[೬]

ಕವಿತೆ ಮನಸ್ಸಿನ ಅನಾವರಣ. ಹೇಗೆಂದರೆ ಮನಸ್ಸಿನಲ್ಲಿರುವ ಮತ್ತು ಆಳದಲ್ಲಿ ಹುದುಗಿರುವ ನೋವು, ಆಸೆ, ಆಕಾಂಕ್ಷೆಗಳನ್ನು ತೆರೆದಿಡುವುದು ಎಂದು ಅರ್ಥ. ಈ ಹಿನ್ನೆಲೆಯಲ್ಲಿ ಮನದ ಪರಿಣಾಮವೆನೆಂದರೆ ಮನಸ್ಸಿನ ಮೇಲಾಗುವ ಪರಿಣಾಮವಲ್ಲ. ಮನಸ್ಸು ಪರಿಣಮಿಸುವುದು ಮನಸ್ಸು ಉಂಟಾದ ಎಡೆಯಲ್ಲಿ ಒಂದು ಹಾಜರಿ ಸೃಷ್ಟಿಯಾಗುವುದು. ಹೀಗೆ ಕವಿತೆಯನ್ನವುದು ಅದು ಮನಸ್ಸಿನ ಹಾಜರಿಯ ಮೂಲಕ ಬರವಣಿಗೆಯನ್ನು ಕೈಗೊಂಡಿದ್ದಾರೆ.

**ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶಗಳು**

* ಬಾಲ್ಯದಲ್ಲಿಯ ಅಕ್ಕನ ಪ್ರೀತಿ ಹಾಗೂ ವಿಶೇಷ ವ್ಯಕ್ತಿ ಎಂದು ನೋಡುತ್ತಿದ್ದ ಘಳಿಗೆಗಳು
* ಸ್ವಾನುಭವ, ನಿಷ್ಠೆ ಮತ್ತು ಅನುಭವ, ಪ್ರಾಮಾಣಿಕ ಅಂಶಗಳು
* ವಿಶಿಷ್ಟ ಸಂವೇದನೆಯ ಮೂಲಕ ಸಾಮಾನ್ಯತೆಯನ್ನು ಸಾಧಿಸುವುದು
* ಭಾವಗಳು, ಅರ್ಥಗಳು, ಲಯಗಳು
* ಕವಿತೆ ಮನಸ್ಸಿನ ಅನಾವರಣ
* ಕವಿತೆ ಮನಸ್ಸಿನ ಹಾಜರಿ

## ಅಧ್ಯಯನದ ಫಲಿತಗಳು

೧. ಕಾವ್ಯ ತತ್ವಗಳ ಪರಿಕಲ್ಪನೆಗಳು ಕವಿಯ ಪರಿಸರ, ಕವಿಯ ಕಾವ್ಯ ಸತ್ವ ಕುರಿತ ಚಿಂತನೆಗಳನ್ನು ಕಂಡುಕೊಳ್ಳಲಾಗಿದೆ.

೨. ಬಾಲ್ಯದ ನೆನಪಿನ ಜೊತೆಗೆ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯ ಅಂಶದಿಂದ ಸಾಹಿತ್ಯ ರಚಿಸಿರುವುದನ್ನು ಗುರುತಿಸಲಾಗಿದೆ.

೩. ಅನ್ಯಸಾಹಿತ್ಯದಿಂದ ಪ್ರೇರಣೆ ಪಡೆದು ತಮ್ಮ ಸಾಂಸ್ಕೃತಿಕ ಪರಿಸರಕ್ಕೆ ಒಗ್ಗಿಸಿಕೊಂಡು ಸಾಹಿತ್ಯ ರಚಿಸಿರುವುದನ್ನು ಕಂಡುಕೊಳ್ಳಲಾಗಿದೆ.

೪. ಸಾಹಿತ್ಯ ಎಂದರೆನು? ಅದು ಸಮಾಜಕ್ಕೆ ಯಾವ ರೀತಿ ಕೊಡುಗೆಯನ್ನು ನೀಡಿದೆ. ಹಾಗೂ ದೌರ್ಜನ್ಯಕ್ಕೆ ಒಳಗಾದವರ ಬಗ್ಗೆ ಸಹಾನುಭೂತಿಯಿಂದ ಅರಿವು ಮೂಡಿಸಲು ಸಾಹಿತ್ಯ ರಚಿಸಿರುವ ಅಂಶ ಗುರುತಿಸಲಾಗಿದೆ.

೫. ವಿಚಾರ ಸರಣಿಗಳು, ತಾತ್ವಿಕ ಚಿಂತನೆಗಳು, ಸೂಕ್ಷ್ಮ ಸಂವೇದನೆಗಳು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೬. ತಾವು ಕಂಡುಕೊಂಡ ಸಾಹಿತ್ಯದ ಅನುಭವಗಳು, ಕನ್ನಡದ ಕರೆ ಹಾಗೂ ಕನ್ನಡದ ಚಳುವಳಿಯ ಪ್ರಭಾವಗಳನ್ನು ಗುರುತಿಸಲಾಗಿದೆ.

೭. ಪರಂಪರೆ ಹಾಗೂ ಆಧುನಿಕತೆಯ ಕುರಿತಾದ ಸಂಬಂಧದ ಬಗ್ಗೆ ಹಾಗೂ ಕ್ರೂರ ಸತ್ಯಗಳನ್ನು ಹೊರಹಾಕಲು ಮತ್ತು ಗತಿಶೀಲವಾದ ನಾಗರೀಕ ಸಮಾಜದ ಸೃಷ್ಟಿಗಾಗಿ ಸಾಹಿತ್ಯ ರಚಿಸಿರುವುದನ್ನು ಗುರುತಿಸಲಾಗಿದೆ.

೮. ಅಸ್ತಿತ್ವದಲ್ಲಿರುವ ವಸ್ತವೊಂದರ ಜೊತೆಗೆ ಕಾವ್ಯಾತ್ಮಕ ಸಂಬಂಧ ಕಂಡುಕೊಂಡಿರುವ ಅಂಶ ಗುರುತಿಸಲಾಗಿದೆ.

೯. ಮಾನವೀಯ ವ್ಯವಸ್ಥೆಯ ನಿರ್ಮಾಣಕ್ಕಾಗಿ ಮತ್ತು ಸಾಹಿತಿಗಳ ವೈಚಾರಿಕ ನೆಲೆ ಹಾಗೂ ಸೃಜನಾತ್ಮಕ ಅಂಶಗಳನ್ನು ಈ ನಿಬಂಧದಲ್ಲಿ ಕಂಡುಕೊಳ್ಳಲಾಗಿದೆ.

## ಅಧ್ಯಯನದ ಸಾಧ್ಯತೆಗಳು

೧. "ನಾನೇಕೆ ಬರೆಯುತ್ತೇನೆ" ಎನ್ನುವ ಕೃತಿಯಲ್ಲಿನ ಲೇಖನಗಳಲ್ಲಿ ಸಾಹಿತ್ಯ ಚಿಂತನೆಯ ಜೊತೆ ಜೊತೆಗೆ ಸಾಂಸ್ಕೃತಿಕ ಚಿಂತನೆಯ ಅಧ್ಯಯನ ಮಾಡಬಹುದು

೨. ಈ ಕೃತಿಯಲ್ಲಿನ ಬರಹಗಾರರನ್ನು ತಲೆಮಾರುಗಳಾಗಿ ವಿಭಾಗಿಸಿಕೊಂಡು ಅವರು ಬರೆದಿರುವ ಲೇಖನಗಳನ್ನು ತೌಲನಿಕವಾಗಿ ಅಧ್ಯಯನ ಮಾಡಬಹುದು.

# ಸಮಾರೋಪ

ಈ ಶತಮಾನದ ಏಳನೆಯ ದಶಕದಿಂಡ ಸಾಹಿತ್ಯವನ್ನು ಕುರಿತ ಚಿಂತನೆಗಳು ಅನ್ವಯಿಕ ಮಾದರಿಯನ್ನು ಬಿಟ್ಟುಕೊಟ್ಟು ಸಾಹಿತ್ಯದ ಸ್ವರೂಪ, ಅದರಿಂದ ಓದುಗರ ಮೇಲೆ ಉಂಟಾಗುವ ಪರಿಣಾಮ ಮುಂತಾದ ತಾತ್ವಿಕ ಪ್ರಶ್ನೆಗಳ ಪರಿಶೀಲನೆಗೆ ಪ್ರಾಮುಖ್ಯತೆ ನೀಡತೊಡಗಿದೆ. ಈ ಹಿನ್ನಲೆಯಲ್ಲಿ ಸಾಹಿತ್ಯ ಚಿಂತನೆಯ ಪ್ರಶ್ನೆಯನ್ನು ಲೇಖಿನ ಸಾಹಿತ್ಯದ ನೆಲೆಯಿಂದ ರೂಪಿಸಿಕೊಳ್ಳಲು ಅವಕಾಶವಿದೆ. ಹಾಗಾಗಿ ಪ್ರಸ್ತುತ ಈ ನಿಬಂಧ ಸಾಹಿತ್ಯ ಮೀಮಾಂಸೆ ಕಾವ್ಯ ತತ್ವಗಳ ಪರಿಕಲ್ಪನೆಗಳು ಕವಿಯ ಪರಿಸರ ಕವಿಯ ಕಾವ್ಯ ಸತ್ವ ಕುರಿತ ಚಿಂತನೆಗಳು ಕಾಣುತ್ತವೆ. ಆ ಮೂಲಕ ಸಾಹಿತ್ಯ ಚಿಂತನೆಯನ್ನು ಗುರುತಿಸಿಕೊಳ್ಳಲಾಗಿದೆ. ಕಾವ್ಯವೆಂದರೆ ಏನು ಅದರ ನಿರ್ಮಿತಿ ಹಾಗೂ ಪ್ರಭಾವ ಪ್ರೇರಣೆಗಳ ಕುರಿತ ಹಿನ್ನಲೆಯ ಸಿದ್ದತೆಗಳ ಚರ್ಚೆಯನ್ನು ಕಂಡುಕೊಳ್ಳಲಾಗಿದೆ. ಸಹೃದಯರ ಸಾಮರ್ಥ್ಯಗಳನ್ನು ಗುಣಾವಗುಣಗಳ ವಿವೇಚನೆ ಮೌಲ್ಯ ನಿರ್ಧಾರ ಗುರುತಿಸಲಾಗಿದೆ. ಮತ್ತು ಸಾಹಿತ್ಯ ಚಿಂತನೆಗೆ ಹಿನ್ನಲೆಯಾಗಿ ಕನ್ನಡ ಕಾವ್ಯದಲ್ಲಿ ನವೋದಯ ಕಾವ್ಯದಿಂದ ಬಂಡಾಯ ಕಾವ್ಯದವರೆಗೂ ಆದ ಪರಿವರ್ತನೆಗಳು ಅತ್ಯಂತ ಪ್ರಭಾವ ಶಾಲಿಯಾಗಿ ಕನ್ನಡ ಸಾಹಿತ್ಯ ಚಿಂತನೆಯ ಮೇಲೆ ಪರಿಣಾಮ ಬೀರಿವೆ ಎಂದು ಹೇಳಬಹುದು. ಹೇಗೆಂದರೆ ಸಾಹಿತ್ಯ ಚಿಂತನೆಯ ಮೂಲಕ ಅಂದಿನಿಂದ ಕಾವ್ಯದಲ್ಲಿ ಕವಿಯ ಮನೋಧರ್ಮದಲ್ಲಿ ಆದ ಬದಲಾವಣೆಗಳನ್ನು ಗುರುತಿಸಲಾಗಿದೆ.

ಇಲ್ಲಿ ನಾನೇಕೆ ಬರೆಯುತ್ತೇನೆ ಲೇಖನಗಳ ಮೂಲಕ ತಮ್ಮ ಅಭಿಪ್ರಾಯಗಳನ್ನು ವ್ಯಕ್ತ ಮಾಡಿರುವ ಎಲ್ಲಾ ಹಿರಿಯ ಬರಹಗಾರರು ಕನ್ನಡ ಸಾಹಿತ್ಯದಲ್ಲಿ ಅವರು ಅಪಾರ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ. ಹಾಗೂ ತಾವು ಯಾಕೆ ಬರೆಯುತ್ತಾರೆ ಎಂಬ ಪ್ರಶ್ನೆಯ ಮೂಲಕ ಉತ್ತರವನ್ನು ಬರಹದ ಮೂಲಕ ಹೇಳಿಕೊಂಡಿದ್ದಾರೆ. ಇಲ್ಲಿ ಮೊದಲನೆಯ ತಲೆಮಾರಿನವರಾದ ಬೇಂದ್ರೆಯವರು ಸಾಹಿತ್ಯ ಮತ್ತು ಸಾರ್ಥಕತೆಗೊಸ್ಕರ ಹಾಗೂ ಇಂಗ್ಲೀಷ ಸಾಹಿತ್ಯ ಮರಾಠಿ ಕಾವ್ಯ ಸಾಹಿತ್ಯಗಳಿಗೆ ಸರಿ ಮೇಲಾಗಬೇಕೆಂಬ ಅಂಶ ಗೋಚರಿಸುತ್ತದೆ. ಹಾಗೂ ಬರೆಯುವವನ ಕಷ್ಟ ಹಾಗೂ ಬರೆಯದವನಿಗೆ ಆಗುವ ನಷ್ಟ ಎರಡೂ ಇಲ್ಲಿ ಅನಾವರಣಗೊಂಡಿವೆ. ಹಾಗೂ ಶಂಬಾ ಜೋಷಿಯವರು ಮತ್ತು ಎಂ.ಎಂ. ಕಲಬುರ್ಗಿಯವರು ಇವರ ಲೇಖನಗಳಲ್ಲಿ ತಾವು ಸತ್ಯದ ಸಂಶೋಧನೆಗಾಗಿ ಎಂಬ ಅಂಶ ವ್ಯಕ್ತಪಡಿಸಿರುವುದು ಕಾಣುವುದರ ಜೊತೆಗೆ ಸಂಶೋಧನೆ ಕೈಗೊಂಡಿರುವುದು ಕಾಣುತ್ತೇವೆ. ಹಾಗೂ ಸಂಸ್ಕೃತಿಯ ಬಗ್ಗೆ ಅವರದೇ ಆದ ತಾತ್ವಿಕ ನಿಲುವುಗಳನ್ನು ಕಟ್ಟಿಕೊಟ್ಟಿದ್ದಾರೆ. ನಂತರ ವ್ಯಾಸರಾಯ

ಬಲ್ಲಾಳರಿಂದ ಚಂದ್ರಶೇಖರ ಕಂಬಾರರವರಿಗೆ ನವ್ಯ ಪಂತಕ್ಕೆ ಸೇರಿದ ಇವರುಗಳು ಬರೆಯಲು ವ್ಯಕ್ತಿ ಕೇಂದ್ರಿತ, ಸ್ವಾತಂತ್ರ್ಯದ ಪರಿಕಲ್ಪನೆ ದಾಂಪತ್ಯ, ಇವುಗಳನ್ನು ಪ್ರಶ್ನಿಸಿ ಹೊಸ ವ್ಯಾಖ್ಯಾನ ನೀಡಿದ್ದಾರೆ. ಅಂದರೆ ಇವರಿಗೆ ಇವುಗಳ ಅಂಶವೇ ಪ್ರಮುಖವಾದದ್ದಾಗಿದೆ ಎಂದು ಗುರುತಿಸಲಾಗಿದೆ. ನಂತರ ೭೦ರ ದಶಕದ ಗೀತಾ ನಾಗಭೂಷಣದಿಂದ ನಾಗೇಶ ಹೆಗಡೆವರೆಗೆ ಇವರ ಲೇಖನಗಳಲ್ಲಿ ವರ್ಗಗಳನ್ನು, ಜಾತಿಗಳನ್ನು ಕುರಿತು ಹಾಗೂ ಮಧ್ಯಮ ಕುಟುಂಬಗಳ ಬದುಕನ್ನು ಕುರಿತು ಆಲೋಚಿಸಿರುವ ಸಂಗತಿ ಕಂಡುಕೊಳ್ಳಲಾಗಿದೆ. ಮತ್ತು ೯೦ರ ದಶಕದ ಅರವಿಂದ ಮಾಲಗತ್ತಿ, ಹಾಗು ಎಸ್. ಮಂಜುನಾಥ ಇವರ ಬರಹಗಳಲ್ಲಿ ಮಾರ್ಕ್ಸ್‌ವಾದ, ಅಂಬೇಡ್ಕರ್ ವಿಚಾರಗಳನ್ನು ಗ್ರಹಿಸಿ ಅವುಗಳನ್ನು ಚಿಂತನೆಗೆ ಒಳಪಡಿಸಿ ವ್ಯಾಖ್ಯಾನಿಸಲಾಗಿದೆ.

"ನಾನೇಕೆ ಬರೆಯುತ್ತೇನೆ" ಎಂದು ಸಾಹಿತಿಗಳು ಕವಿಗಳು, ತಮ್ಮ ತಮ್ಮ ಅನಿಸಿಕೆಗಳು ಅಭಿಪ್ರಾಯಗಳನ್ನು ಹಾಗು ಸಾಹಿತ್ಯದ ಕುರಿತ ಚಿಂತನೆ ಆಲೋಚನೆಗಳನ್ನು ಗ್ರಹಿಸಿ ಆ ಮೂಲಕ ತಾತ್ವಿಕ ದೃಷ್ಟಿಕೋನ ಕಂಡುಕೊಳ್ಳಲಾಗಿದೆ. ಅವು ಸ್ವಾತಂತ್ರ್ಯದ ಪರಿಕಲ್ಪನೆ ಬಾಲ್ಯದ ಅನುಭವಗಳು, ಬೆಳೆದ ಪರಿಸರ, ಕಷ್ಟ-ನಷ್ಟಗಳು, ವಿವಿಧ ಓದಿನ ಪುಸ್ತಕಗಳು, ಉತ್ತಮ ಸಮಾಜದ ಸೃಷ್ಟಿ, ಸಂತೋಷಕ್ಕಾಗಿ, ಆನಂದಕ್ಕಾಗಿ, ಕೀರ್ತಿ, ಗೌರವ, ಪ್ರತಿಷ್ಠೆಗಾಗಿ ಹಾಗೂ ವಾಸ್ತವ ಬದುಕಿನ ಅಂಶಗಳು ಮತ್ತು ಶೂದ್ರ ಹೆಣ್ಣು ಮಕ್ಕಳ ಬದುಕನ್ನು ಬಯಲಿಗೆಳೆದು ಅವರಿಗೆ ಅವರ ಸ್ಥಾನ ಮಾನವನ್ನು ಗುರುತಿಸುವುದು, ಸಮಾಜದಲ್ಲಿನ ಕೌರ್ಯ, ದೌರ್ಜನ್ಯಗಳ ಬಗ್ಗೆ ತಡೆಹಿಡಿಯುವುದು ಹೀಗೆ ಲೇಖಕರ ದೃಷ್ಟಿಕೋನ, ಪ್ರೇರಣೆ, ಪ್ರಭಾವ, ಧೋರಣೆಯನ್ನು ಕಂಡುಕೊಳ್ಳಲಾಗಿದೆ.

ಒಟ್ಟಾರೆಯಾಗಿ "ನಾನೇಕೆ ಬರೆಯುತ್ತೇನೆ" ಎಂದು ಇಲ್ಲಿ ಎಲ್ಲರೂ ಹೇಳಿಕೊಂಡಿದ್ದಾರೆ. ಎಲ್ಲರೂ ಲೇಖಕರಾದರೂ ಅವರನ್ನು ಬರವಣಿಗೆಗೆ ಮುಂದಾಗಿಸಿದ ಕಾಲ ಹೆಚ್ಚು ಕಮ್ಮಿ ಒಂದೇ ಆದರೂ ಸಂದರ್ಭ, ಸನ್ನಿವೇಶ, ಪ್ರೇರಣೆ, ಬೇರೆ ಬೇರೆಯಾಗಿ ಹಲವರಿಗೆ ಬಾಲ್ಯದ ನೆನಪಿನ ಜೊತೆಗೆ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯೂ ಉಂಟಾಗಿದೆ. ಹಾಗೂ ಅನ್ಯ ಸಾಹಿತ್ಯದಿಂದ ಪಡೆದು ತಮ್ಮ ಸಾಂಸ್ಕೃತಿಕ ಪರಿಸರಕ್ಕೆ ಒಗ್ಗಿಸಿಕೊಂಡಿದ್ದನ್ನು ಮತ್ತು ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮವನ್ನು ದೊರಕಿಸಿ ಕೊಟ್ಟಿರುವ ಅಂಶಗಳನ್ನು ಈ ನಿಬಂಧದಲ್ಲಿ ಕಂಡುಕೊಳ್ಳಲಾಗಿದೆ.

# ಪರಾಮರ್ಶನ ಗ್ರಂಥಗಳು

೧. ಅಮರೇಶ ನುಗಡೋಣಿ, (ಸಂ) 'ನಾನೇಕೆ ಬರೆಯುತ್ತೇನೆ', ಪ್ರಸಾರಾಂಗ ಕ.ವಿ.ವಿ. ಹಂಪಿ–೨೦೦೯

೨. ಅಶೋಕ ಟಿ.ಪಿ. 'ಸಾಹಿತ್ಯ ಸಂದರ್ಭ', ಅಕ್ಷರ ಪ್ರಕಾಶನ ಸಾಗರ–೧೯೯೧

೩. ಕೀರ್ತಿನಾಥ ಕುರ್ತುಕೋಟಿ, 'ಕನ್ನಡ ಸಾಹಿತ್ಯ ಸಂಗಾತಿ', ಪ್ರಸಾರಾಂಗ ಕ.ವಿ.ವಿ. ಹಂಪಿ–೧೯೭೨

೪. ಕೀರ್ತಿನಾಥ ಕುರ್ತಕೋಟಿ 'ಯುಗಧರ್ಮ ಸಾಹಿತ್ಯ ದರ್ಶನ', ಮನೋಹರ ಗ್ರಂಥಮಾಲೆ ಧಾರವಾಡ–೧೯೬೨

೫. ಚಿದಾನಂದಮೂರ್ತಿ ಎಂ. 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ', ಪ್ರಸಾರಾಂಗ ಬೆಂಗಳೂರು ವಿ.ವಿ. ಬೆಂಗಳೂರು– ೧೯೭೫

೬. ನಾರಾಯಣ ಕೆ.ವಿ. 'ಬೇಂದ್ರೆ ಕಾವ್ಯದೃಷ್ಟಿ', ಕನ್ನಡ ಸಂಘ ಕ್ರೈಸ್ತ ಕಾಲೇಜ್ ಬೆಂಗಳೂರು–೧೯೮೪

೭. ನಾಗರಾಜ ಕಿ.ರಂ. 'ಕನ್ನಡ ಕಾವ್ಯ ಪರಂಪರೆ ಸಂಸ್ಕೃತ ಕಾವ್ಯ ಮೀಮಾಂಸೆ', ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು–೧೯೯೦

೮. ನಾಗರಾಜ ಡಿ.ಆರ್. 'ಅಮೃತ ಮತ್ತು ಗರುಡ', ಪುಸ್ತಕ ಚಂದನ ಬೆಂಗಳೂರು–೧೯೮೩

೯. ಬಸವರಾಜು ಎಲ್. 'ಬಸವಣ್ಣನ ವಚನಲು ಗೀತಾ ಬುಕ್‌ಹೌಸ್–೧೯೯೦

೧೦. ಬಸವರಾಜ ಸಾದರ (ಸಂ) 'ಕನ್ನಡ ಸಾಹಿತ್ಯ ಘಟ್ಟಗಳು' ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ–೨೦೦೨

೧೧. ರಹಮತ್ ತರೀಕೆರೆ (ಸಂ) 'ಕನ್ನಡ ಸಾಹಿತ್ಯ ಮೀಮಾಂಸೆ', ಪ್ರಸಾರಾಂಗ ಕ.ವಿ.ವಿ. ಹಂಪಿ–೨೦೦೧

೧೨. ರಹಮತ್ ತರೀಕೆರೆ (ಸಂ) 'ಇಲ್ಲಿ ಯಾರು ಮುಖ್ಯರಲ್ಲ', ಪ್ರಸಾರಾಂಗ ಕ.ವಿ.ವಿ. ಹಂಪಿ–೨೦೦೫

೧೩. ರಹಮತ್ ತರೀಕೆರೆ (ಸಂ) 'ಮಾತು ತಲೆಯೆತ್ತುವ ಬಗೆ', ಪ್ರಸಾರಾಂಗ ಕ.ವಿ.ವಿ. ಹಂಪಿ–೨೦೦೫

೧೪. ರಾಮಚಂದ್ರಪ್ಪ ಬರಗೂರು 'ಬಂಡಾಯ ಸಾಹಿತ್ಯ ಮೀಮಾಂಸೆ', ಅನ್ವೇಷಣೆ ಪ್ರಕಾಶನ ವಿಜಯನಗರ ಬೆಂಗಳೂರು–೧೯೯೧

೧೫. ರಾಘವೇಂದ್ರ ಪಾಟೀಲ (ಸಂ) 'ನವಮೇಘ ರೂಪ ಸಂವಾದ', ಪ್ರಶನ ಮಲ್ಲಾಡಿಹಳ್ಳಿ–೧೯೯೪

೧೬. ರಾಜಪ್ಪ ದಳವಾಯಿ 'ಕನ್ನಡ ಸಾಹಿತ್ಯ ಕೋಶ' ದಳವಾಯಿ ಪ್ರಕಾಶನ ಜ್ಞಾನ ಭಾರತಿ ಬೇಂಗಳೂರು–೨೦೦೮

೧೭. ಲಕ್ಷ್ಮಿನಾರಾಯಣ ಭಟ್ಟ ಎನ್.ಎಸ್. (ಸಂ) 'ಕನ್ನಡ ಸಾಹಿತ್ಯ ಪ್ರತಿಭೆಯ ಸ್ವರೂಪ'–೧೯೮೯
೧೮. ವೀರಣ್ಣ ದಂಡೆ 'ವಚನಕಾರರ ಕಾವ್ಯ ಮೀಮಾಂಸೆ' ಕವಿಮಾರ್ಗ ಪ್ರಕಾಶನ ಕಲ್ಬುರ್ಗಿ–೨೦೦೫
೧೯. ವೀರಣ್ಣ ದಂಡೆ 'ಶಿಷ್ಟಕಾವ್ಯ ಮೀಮಾಂಸೆ' ಕವಿಮಾರ್ಗ ಪ್ರಕಾಶನ ಕಲ್ಬುರ್ಗಿ–೨೦೦೫
೨೦. ವೆಂಕಟಾಚಲಶಾಸ್ತ್ರೀ (ಸಂ) 'ಪಂಪ ಸಂಪುಟ', ಪ್ರಸಾರಾಂಗ ಕ.ವಿ.ವಿ. ಹಂಪಿ–೨೦೦೬
೨೧. ಶಿವರುದ್ರಪ್ಪ ಜಿ.ಎಸ್. 'ಕನ್ನಡ ಕವಿಗಳ ಕಾವ್ಯ ಕಲ್ಪನೆ', ಕರ್ನಾಟಕ ವಿ.ವಿ. ಧಾರವಾಡ–೧೯೮೯
೨೨. ಶಿವರುದ್ರಪ್ಪ ಜಿ.ಎಸ್. 'ವಚನಗಳಲ್ಲಿ ಕಾವ್ಯ ತತ್ವ' ಕರ್ನಾಟಕ ವಿ.ವಿ. ಧಾರವಾಡ–೧೯೮೯
೨೩. ಶಿವರುದ್ರಪ್ಪ ಜಿ.ಎಸ್. 'ಕನ್ನಡ ಸಾಹಿತ್ಯ ಸಂದರ್ಭ', ಕರ್ನಾಟಕ ಸಾಹಿತ್ಯ
೨೪. ಶಿವರುದ್ರಪ್ಪ ಜಿ.ಎಸ್. 'ಸಮಗ್ರ ಗದ್ಯ ಸಂಪುಟ ೨' ಶಾರದ ಪ್ರಕಾಶನ ಬೆಂಗಳೂರು
೨೫. ಶಿವರುದ್ರಪ್ಪ ಜಿ.ಎಸ್. 'ಕನ್ನಡ ಕಾವ್ಯ ತತ್ವ ಚಿಂತನೆ' ಪ್ರಸಾರಾಂಗ ಕ.ವಿ.ವಿ. ಹಂಪಿ–೨೦೦೭
೨೬. ಶೇಷಗಿರಿರಾವ್ 'ಹೊಸಗನ್ನಡ ಸಾಹಿತ್ಯ ಚರಿತ್ರೆ', ಅಂಕಿತ ಪ್ರಕಾಶನ ಬೆಂಗಳೂರು–೨೦೦೬
೨೭. ಸಬಿಹಾ ಭೂಮಿಗೌಡ (ಸಂ) 'ಕನ್ನಡ ಸಾಹಿತ್ಯ ಮೀಮಾಂಸೆ' ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು–೨೦೦೭
೨೮. ಸೀತಾರಾಮಯ್ಯ ವಿ. 'ಕವಿರಾಜ ಮಾರ್ಗ' ಐ.ಬಿ.ಹೆಚ್. ಪ್ರಕಾಸನ ಬೆಂಗಳೂರು–೧೯೭೩
೨೯. ಸೀತಾರಾಮಯ್ಯ ಎಂ.ವಿ. 'ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ', ಪ್ರಸಾರಾಂಗ ಮೈಸೂರು ವಿ.ವಿ. ಮೈಸೂರು
೩೦. ಸಿದ್ಧರಾಮಯ್ಯ ಜಿ.ಎಸ್., ಕೃಷ್ಣಯ್ಯ ಎಂ. (ಸಂ) 'ಸಾಲು ದೀಪಗಳು' ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

**ಸಂಶೋಧನಾ ನಿಬಂಧಗಳು**

೧. ಸವಿತಾ ಕುಲಕರ್ಣಿ 'ವಚನಗಳಲ್ಲಿ ಕನ್ನಡ ಕಾವ್ಯ ಮೀಮಾಂಸೆಯ ಪರಿಕಲ್ಪನೆಗಳು ಕ.ವಿ.ವಿ. ಹಂಪಿ–೧೯೯೫
೨. ರೇಣುಕಾ ಪ್ರಸಾದ್ 'ಕನ್ನಡ ಚಿಂತನೆಯಲ್ಲಿ ಸಂಸ್ಕೃತಿಯ ವ್ಯಾಖ್ಯಾನಗಳು' ಕ.ವಿ.ವಿ. ಹಂಪಿ–೧೯೯೪

